# ಕೊಡಗು  ಸಂಗಾತಿ


ಮೇ 1 ರಿಂದ 15, 2001 | ಪಾಕ್ಷಿಕ ಪತ್ರಿಕೆ | (ಪಗ್ಗ 18-31 ಬೇಶ 1)

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಸಂಪಾದಕಿ : ಪಟ್ಟಡ ಶೀಲಾಮಣಿ    Registered : 10-01-96 TCI Kar. 09592    ಕನ್ನಡ ಮತ್ತು ಅರೆಭಾಷೆಯಲ್ಲಿ ಪ್ರಕಟಿತ

Reg. No. KA/SK/MYS-88    ಸಂಪುಟ : 5    ಸಂಚಿಕೆ : 9    ಪುಟಗಳು : 24    ಬೆಲೆ ರೂ. : 6-00




ಲೇಖನ : ಒಳಪುಟಗಳಲ್ಲಿ

ಕರ್ನಾಟಕ ರಾಜ್ಯದ ನೀರಾವರಿ ಇಲಾಖೆಯ ಮುಖ್ಯ ಇಂಜಿನಿಯರ್ ಆಗಿ ನಿವೃತ್ತಿಯಾಗಿರುವ ಶ್ರೀ ಸಿರಕಜೆ ದೇವಯ್ಯ ಭರತ್.

## ಶುಭಾಶಯಗಳು


ಶರತ್ ಚಂದ್ರ ರಾಮೇಗೌಡ
ಜನನ : 23-7-2000

ದಿನಾಂಕ 23-7-2000ದಲ್ಲಿ ಜನಿಸಿ, 26-4-2001 ರಲ್ಲಿ ನೀನು ಶರತ್‌ಚಂದ್ರನೆಂದು ನಾಮಕರಣಗೊಂಡೆ. ನೀನು ಹುಟ್ಟಿದ ನಾಡಿಗೂ ದೇಶಕ್ಕೂ ಕೀರ್ತಿ ತರುವ ಸುಪುತ್ರನಾಗೆಂದು ಹರಿಸುವ ನಿನ್ನ ಮಾತಪಿತೃರು.

ತಂದೆ : **ರಾಮೇಗೌಡ ಕೆ. ಎಂ.**
ತಾಯಿ : **ಸರಸ್ವತಿ ರಾಮೇಗೌಡ**
**ಹಾಗೂ ಬಂಧು ಮಿತ್ರರು**
ವಿಳಾಸ : # 251, ಹೆಬ್ಬಾಳು 1ನೇ ಹಂತ,
ಲೋಕನಾಯಕನಗರ, ಮೈಸೂರು ☎ :

## ಹುಟ್ಟುಹಬ್ಬದ ಶುಭಾಶಯಗಳು


ಶ್ರವಣ್
ಜನನ : 26-04-2000

ನಿನ್ನ ಪ್ರಥಮ ವರ್ಷದ ಹುಟ್ಟುಹಬ್ಬಕ್ಕೆ ಶುಭಾಶಯವನ್ನು ಕೋರುವ

**(ಕಟ್ರತನ ಶ್ರೀಮತಿ ಮತ್ತು ಶ್ರೀ ಲತಾ ರಾಜೇಶ್‌ರವರ ಪುತ್ರ)**

ಅಜ್ಜ : **ಕಟ್ರತನ ಉಲ್ಲಾಸ**, ಬಲಮುರಿ ಗ್ರಾಮ
ಅಜ್ಜಿ : **ಕಟ್ರತನ ಕಾಮಿನಿ ಉಲ್ಲಾಸ**, ಬಲಮುರಿ ಗ್ರಾಮ
ಚಿಕ್ಕಪ್ಪ : **ಕಟ್ರತನ ಸುಧೀಶ್**, ಬೆಂಗಳೂರು
ಅವ್ವ : **ತುಂತಜೆರ ಮುತ್ತಮ್ಮ**, ಮಡಿಕೇರಿ

## ಚಂದದಾರರ ಗಮನಕ್ಕೆ

**ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆಯ ಚಂದದಾರರಾಗಿದ್ದು 31-12-2000ರ ತನಕ ನವೀಕರಿಸದೆ ಇರುವ ಚಂದದಾರರು ಕೂಡಲೇ ನವೀಕರಿಸಿಕೊಳ್ಳುವುದು. ಅಲ್ಲದೆ ಹಾಲಿ ವರ್ಷದ ಕೂಡಲೆ ಸದಸ್ಯತನವನ್ನು ನವೀಕರಿಸಿಕೊಳ್ಳುವಂತೆ ಸಂಗಾತಿ ಬಳಗದ ಕಳಕಳಿಯ ಪ್ರಾರ್ಥನೆ. ಅಂತೆಯೇ 31-12-2000ದ ತನಕ ನವೀಕರಿಸದಿರ್ರು ಸದಸ್ಯರು 31-5-2001ರ ಒಳಗಾಗಿ ನವೀಕರಿಸಿ ಪತ್ರಿಕಾ ಅಭಿವೃದ್ಧಿಗೆ ಸಹಕರಿಸುವಂತೆ ನಮ್ಮ ಮನವಿಯಾಗಿದೆ.**

ಸಂಪಾದಕಿ : **ಪಟ್ಟಡ ಶೀಲಾಮಣಿ**
ಗೌರವ ಸಂಪಾದಕ : **ಪಟ್ಟಡ ಪ್ರಭಾಕರ ಮತ್ತು ಬಳಗ**

## AN APPEAL LETTER FOR TOUR TO ENGLAND

I Arun Kumar S/o Poreyana R. Madappa, I wish to inform that, I have been selected to represent Karavali Cricket Clinic Team (Undy 19) for their tour to England to play '12' Matches in the month of May 2001. This tour is very important to prepare myself for a future in Cricket. The total cost of the tour will be Rs. 80,000/-.

Therefore, I here by request our Community Members to send Donations/Financial Assistance to my address either by Cheques or D.D. in fares of "P. M. Arun Kumar" Payable at 'Bangalore'

I request that the Money should back my hand on before the 10th of May 2001.

Thanking you,



**P. M. ARUN KUAMR,** S/o P. R. Madappa, # 17, 12th Cross, Pipeline, Cholur Palya, Banglaore - 560 023, ☎ : 080 - 3382802

**ತಿದ್ದುಪಡಿ** : ಸಂಪುಟ 5 ಸಂಚಿಕೆ 8, ಸಂಪಾದಕೀಯ : ಸಂಗಾತಿಯು ಐದನೇ ವರ್ಷಕ್ಕೆ ಪಾದಾರ್ಪಣೆಯ ನಾಲ್ಕನೆ ಪ್ಯಾರದಲ್ಲಿ ಬರುವ "ಡಾ. ಪರಮೇಶ್ವರ ಭಟ್ಟರು, ಹವೀಕರಾಡುವ ಭಾಷೆಗೆ ಹವೀಕ ಕನ್ನಡ, ಗೌಡರಾಡುವ ಅರೆಭಾಷೆಗೆ ಗೌಡ ಕನ್ನಡವೆಂದು ಕರೆದಿದ್ದಾರೆ. ಇದನ್ನು ಡಾ. ಪರಮೇಶ್ವರ ಭಟ್ಟರ ಬದಲು ಡಾ.ಮರಿಯಪ್ಪ ಭಟ್ಟರು" ಎಂದು ಓದುಗರು ಓದಿಕೊಳ್ಳುವುದು. ದೋಷಕ್ಕೆ ವಿಷಾದಿಸುತ್ತೇವೆ.

**ಸಂಪಾದಕಿ**



# 2001, ಮೇ 1 ರಿಂದ 16 ರ ತನಕ







| | |
|---|---|
|  ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ | **ಕೊಡಗು ಸಂಗಾತಿ,** 35,"ಸವಿತಾ ನಿಲಯ", 1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - 12. **ಫೋನ್ : 95821/516771** |
|  ಮಡಿಕೇರಿಯಲ್ಲಿ ಸಂಗಾತಿ ಕಛೇರಿ | ಬೈತಡ್ಕ ಜಾನಕಿ ಬೆಳ್ಯಪ್ಪ,,ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, **ಫೋನ್ : 08272/28047** |
|  ಚಿಹ್ನೆ, ಹಸೆಮಣೆ/ಶುಭಾಶಯ ಕಾರ್ಡ್ಸ್ ಕ್ಯಾಸೆಟ್/ಕೀ ಚೈನ್ ಲಭ್ಯ | **ಕುಂಭಗೌಡನ ಪ್ರವೀಣ್‌ಕುಮಾರ್, ವೆಜಿಟೆಬಲ್ ಶಾಪ್,** ಪಾಂಡನ ಕಾಂಪೌಂಡ್, ಅಪ್ಪಯ್ಯಗೌಡ ರಸ್ತೆ, ಮಡಿಕೇರಿ, |
|  ಕುಶಾಲ ನಗರ | **ಕುಂಭಗೌಡನ ಸೋಮಣ್ಣ,** ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ - 571 234 **ಫೋನ್ :** 08276/73370 |
|  ಬೆಂಗಳೂರು ಮಹಾನಗರ | ಕಲ್ಲುಮುಟ್ಲು ಬಸಪ್ಪ, ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು -19,**ಫೋನ್ :** 080/6500946 |

ಚಂದಾ ವಿವರ : ಜೀವಾವಧಿ ಸದಸ್ಯತನ - **2000** ರೂ., ಬಿಡಿ ಪ್ರತಿ - **6** ರೂ., ಅರ್ಧ ವಾರ್ಷಿಕ **-75** ರೂ., ವಾರ್ಷಿಕ ಚಂದಾ - **150** ರೂ. (ಅಂಚೆ ವೆಚ್ಚ ಸೇರಿ), **ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.**

# ಸಂಪಾದಕೀಯ : ಪರದೇಶಗಳಿಗೆ ಗಿಡಮೂಲಿಕೆಗಳ ರವಾನೆ

ಭಾರತ ಸರ್ಕಾರವು ಭಾರತದ ಅಮೂಲ್ಯ ಗಿಡಮೂಲಿಕೆಗಳನ್ನು ಪರದೇಶಗಳಿಗೆ ರಫ್ತುಮಾಡುವುದರಲ್ಲಿ ಪ್ರಪಂಚದಲ್ಲಿಯೇ ಅಗ್ರಗಣ್ಯ ಸ್ಥಾನ ಪಡೆದಿದೆ ಎಂಬ ಸುದ್ದಿಯೇನೊ ಸಂತೋಷದ ಸಂಗತಿಯಾದರೂ ಈ ರೀತಿಯ ರಫ್ತುಗಳಿಂದ ನಮ್ಮಲ್ಲಿರುವ ಅಮೂಲ್ಯವಾದ ಗಿಡಮೂಲಿಕೆಗಳ ವಿನಾಶಕ್ಕೆ ಕಾರಣವಾದೀತೆ ಎಂಬ ಭಯ ಉಂಟಾಗುತ್ತದೆ. ಕಾರಣವೇನೆಂದರೆ ನಮ್ಮಲ್ಲಿ ದೊರೆಯುವ ಗಿಡಮೂಲಿಕೆಗಳು ಹೆಚ್ಚಾಗಿ ನಮ್ಮ ಅರಣ್ಯ ಪ್ರದೇಶಗಳಲ್ಲಿ ಸಿಗುವುದರಿಂದ ಹಣದ ಆಸೆಗಾಗಿ ಅರಣ್ಯದಲ್ಲಿ ಸಿಗುವ ಗಿಡಮೂಲಿಕೆಗಳನ್ನು ಅಗೆದು ತೆಗೆದು ಅಲ್ಪಸ್ವಲ್ಪ ಉಳಿದಿರುವ ಗಿಡಮುಲಿಕೆಗಳು ಕಣ್ಮರೆಯಾಗುವ ಪರಿಸ್ಥಿತಿ ಉಂಟಾಗಬಹುದು. ಈ ರೀತಿ ಆಗದೆ ಗಿಡಮೂಲಿಕೆಗಳನ್ನು ಸರ್ಕಾರವಾಗಲಿ ಯಾ ಖಾಸಗಿಯವರಾಗಲಿ ಬೆಳೆಸಿ ಹೊರದೇಶಗಳಿಗೆ ರವಾನಿಸಿದರೆ ತೊಂದರೆಯಾಗದು. ಈ ರೀತಿ ಏರ್ಪಾಡು ಮಾಡದೆ, ನೈಸರ್ಗಿಕವಾಗಿ ದೊರೆಯುವ ಗಿಡಮೂಲಿಕೆಗಳನ್ನು ಹೊರದೇಶಗಳಿಗೆ ರಫ್ತುಮಾಡುವುದರಿಂದ ಇಲ್ಲಿ ದೊರೆಯುವ ಗಿಡಮೂಲಿಕಗಳ ನಾಶ ಖಂಡಿತ. ನಮ್ಮ ರಾಜ್ಯದಲ್ಲಿ ಶ್ರೀಗಂಧ ಯಥೇಚ್ಛವಾಗಿ ಖಾಸಗಿ ಹಿಡುವಳಿಗಳಲ್ಲೂ ಬೇಕಾದಷ್ಟು ದೊರೆಯುತ್ತಿತ್ತು. ಈಗ ಸರ್ಕಾರದ ಅಭಯಾರಣ್ಯಗಳಲ್ಲಿ ಮಾತ್ರ ಕಾಣಸಿಗುತ್ತದೆ. ಕಳ್ಳ ಸಾಗಾಣಿಕೆದಾರರು ಎಲ್ಲವನ್ನೂ ನಾಶ ಮಾಡಿದ್ದಾರೆ. ಈ ವಿಷಯವನ್ನು ಸರ್ಕಾರ ಹಾಗೂ ಪ್ರಜ್ಞಾವಂತರು ಜಾಗರೂಕತೆ ವಹಿಸಬೇಕೆಂದು ಸಂಗಾತಿಯ ಸೂಚನೆ.

## ಮುತ್ತಾರ್ಮುಡಿಯಲ್ಲಿ ಜರುಗಿದ ಭದ್ರಕಾಳಿ ದೇವರ ಉತ್ಸವ

ಮೂರ್ನಾಡು ಸಮೀಪದ ಮುತ್ತಾರ್ಮುಡಿಯಲ್ಲಿ ಭದ್ರಕಾಳಿದೇವರ ಉತ್ಸವವು ಭಕ್ತಿ, ಶ್ರದ್ಧೆಗಳಿಂದ ಏಪ್ರಿಲ್ 7, 8, 9, ರಂದು ಜರುಗಿತು. ಅತ್ಯಂತ ಅಲ್ಪ ಅವಧಿಯಲ್ಲಿ ಸುಂದರ ದೇವಾಲಯವನ್ನು ನಿರ್ಮಿಸಿಕೊಂಡು ಉತ್ಸವ ಆಚರಿಸುತ್ತಿರುವ ಶ್ರೇಯಸ್ಸು ಆ ಗ್ರಾಮಸ್ಥರಿಗೆ ಸಲ್ಲುತ್ತದೆ. ಅಂದರೆ ಪ್ರಾಚೀನ ಕಾಲದಲ್ಲಿ ಆ ಊರಿನಲ್ಲಿ ದೇವರ ಉತ್ಸವ ನಡೆಯುತ್ತಿದ್ದು, ಕಾರಣಾಂತರಗಳಿಂದ ಉತ್ಸವವು ನಿಂತುಹೋಗಿತ್ತು. ಆದರೆ ಕ್ರಮೇಣ ಗ್ರಾಮಸ್ಥರಿಗೆ ತಮ್ಮ ಕೆಲಸ ಕಾರ್ಯಗಳಲ್ಲಿ ಹಲವು ತೊಡಕುಗಳುಂಟಾದಾಗ ಈ ಉತ್ಸವದ ಕೊರತೆಯೇ ಅದಕ್ಕೆಲ್ಲ ಕಾರಣ ಎಂಬ ಮನವರಿಕೆಯಾಗಿ, ಗ್ರಾಮಸ್ಥರೆಲ್ಲರೂ ಸೇರಿ ಮತ್ತೆ ಉತ್ಸವ ಆಚರಿಸಲು ತೀರ್ಮಾನಿಸಿದರು. ಅದರ ಫಲಶ್ರುತಿಯೇ ಈಗಿನ ದೇವಾಲಯ ಮತ್ತು ದೇವರ ಉತ್ಸವ. ದೇವರ ಸಹಾಯವೊ ಎಂಬಂತೆ ಅಲ್ಪಕಾಲದಲ್ಲಿಯೇ ಈ ಗ್ರಾಮಸ್ಥರು ಅತ್ಯಂತ ಸುಂದರ ಮತ್ತು ಸುಸಜ್ಜಿತ ದೇವಾಲಯ ನಿರ್ಮಿಸಿಕೊಂಡು, ಕಳೆದ ಆರು ವರ್ಷಗಳಿಂದ ನಿರಂತರವಾಗಿ ಭಕ್ತಿರಸ ಉತ್ಸವ ಆಚರಿಸಿಕೊಂಡು ಬರುತ್ತಿದ್ದಾರೆ.

ಹಬ್ಬ ನಡೆಯುವ ಕೆಲದಿನಗಳ ಮುಂಚೆ ಊರಿನಲ್ಲಿ ಕಟ್ಟು (ನಿಯಮ) ಬೀಳುತ್ತದೆ. ನಂತರ ಗ್ರಾಮಸ್ಥರು ಶುದ್ಧ ಮುದ್ರಿಕೆಯಿಂದಿರುತ್ತಾರೆ. ಇಲ್ಲಿ ಹಬ್ಬವು ಮೂರುದಿನಗಳ ಕಾಲ ನಡೆಯುತ್ತದೆ. ಪಾರಮಜಲು ಮನೆಯವರಿಗೆ ಇಲ್ಲಿ ದೇವರು ಬರುತ್ತದೆ. ಉತ್ಸವದ ಮೊದಲ ದಿನ ಹೋಮ ಮತ್ತು ದೇವರು ಬಲಿ ಬರುವುದು ನಡೆಯುತ್ತದೆ. ಎರಡನೇ ದಿನ ಮಹಾಪೂಜೆ, ಹೋಮ ಮತ್ತು ಬಲಿ ಬರುವುದು, ಮೂರನೇ ದಿನ ದೇವರು ಮುತ್ತಾರ್ಮುಡಿ ಹೊಳೆಗೆ ಸಾಗಿ ಜಳಕಮಾಡಿ, ಮತ್ತೆ ಬನಕ್ಕೆ ಸಾಗಿ ಹಿಂತಿರುಗಿ ದೇವಾಲಯ ತಲುಪುತ್ತದೆ. ಅದೇ ದಿನ ರಾತ್ರಿ ಕುರ್ದಿ ಪೂಜೆಯೊಂದಿಗೆ ಜಾತ್ರೋತ್ಸವ ಮುಕ್ತಾಯಗೊಳ್ಳುತ್ತದೆ. ಈ ಉತ್ಸವ ಸಂಪೂರ್ಣವಾಗಿ ಕಾಳೇಘಾಟ್ ತಂತ್ರಿಗಳಿಂದ ನಡೆಯುತ್ತದೆ. ಜಾತ್ರೆಯ ಸಂದರ್ಭದಲ್ಲಿ ಆಗಮಿಸುವ ಎಲ್ಲಾ ಭಕ್ತಾದಿಗಳಿಗೆ ಊಟದ ವ್ಯವಸ್ಥೆಯನ್ನು ಮಾಡಲಾಗಿರುತ್ತದೆ. ಇಡೀ ಗ್ರಾಮದ ಯುವ ಜನತೆ ಸ್ವಯಂ ಸೇವಕರಾಗಿ ದೇವರ ಕೆಲಸದಲ್ಲಿ ತೊಡಗಿಕೊಂಡು, ಆಗಮಿಸುವ ಭಕ್ತರಿಗೆ ಸಹಕರಿಸುವುದು ಇಲ್ಲಿನ ವಿಶೇಷ ವೈಶಿಷ್ಠವಾಗಿದೆ

**— ಪಟ್ಟಡ ಶಿವಕುಮಾರ್, ಉಪನ್ಯಾಸಕ, ನಾಪೋಕ್ಲು.**

---

## ಗೀತಸಾರ

"ಆದದೆಲ್ಲ ಒಳ್ಳೆಯದಕ್ಕೆ ಆಗಿದೆ,
ಆಗುತ್ತಿರುವುದೆಲ್ಲ ಒಳ್ಳೆಯದೇ ಆಗುತ್ತಿದೆ,
ಆಗಲಿರುವುದು ಒಳ್ಳೆಯದೇ ಆಗಲಿದೆ,

ರೋದಿಸಲು ನೀನೇನು ಕಳೆದುಕೊಂಡಿರುವೆ ?
ಕಳೆದುಕೊಳ್ಳಲು ನೀನು ತಂದಿರುವುದಾದರೂ ಏನು?
ನಾಶವಾಗಲು ನೀನು ನಿರ್ಮಾಣ ಮಾಡಿರುವುದಾದರೂ ಏನು?

ನೀನೇನು ಪಡೆದಿದ್ದರೂ ಅದು ಇಲ್ಲಿಂದಲೇ ಪಡೆದಿರುವೆ,
ಏನನ್ನೂ ನೀಡಿದ್ದರೂ ಅದನ್ನೂ ಇಲ್ಲಿಗೆ ನೀಡಿರುವೆ.
ನಿನ್ನೆ ಬೇರ್ಯಾರದ್ದೊ ಆಗಿದ್ದದ್ದು ಇಂದು ನಿನ್ನದಾಗಿದೆ.
ಮತ್ತೆ ನಾಳೆ ಇನ್ಯಾರದ್ದೊ ಆಗಲಿದೆ"

"ಪರಿವರ್ತನೆ ಜಗದ ನಿಯಮ"

— ಕಟ್ರತನ ಸುಧಿ ಉಲ್ಲಾಸ, ಬೆಂಗಳೂರು.

---

ಟೊಳ್ಳು ಮಾತು ಸುಳ್ಳಿಗಿಂತ ಕಡೆ.

# ಅರೆಭಾಷೆ ಮತ್ತು ಗೌಡ ಸಂಸ್ಕೃತಿ

– ಪಟ್ಟಡ ಪ್ರಭಾಕರ, ಕೊಡಗು ಸಂಗಾತಿ ಗೌ. ಸಂ.

ಅರೆ ಎಂದರೆ ಅರ್ಧವೆನ್ನುವ ಅರ್ಥವು ಮೇಲ್ನೋಟಕ್ಕೆ ಕಂಡುಬರುತ್ತದೆಯಾದರು ಅರೆ ಎಂದರೆ ಗಟ್ಟಿ ವಸ್ತುವೆಂದು ಸಂಸ್ಕೃತದಲ್ಲಿ ಬರುತ್ತದೆ. ಅರೆ ಎಂದರೆ ಗಟ್ಟಿಯಾದ ಬೆಟ್ಟ ಗುಡ್ಡಗಳ ಪ್ರದೇಶ ಗಳಲ್ಲಿ ವಾಸವಿರುವವರೆಂದು ಅವರು ಮಾತನಾಡುವ ಭಾಷೆಯನ್ನು ಅರೆಭಾಷೆಯೆಂದು ಕರ್ನಾಟಕದ ಹಿಂದಿನ ಹಲವಾರು ವಿದ್ವಾಂಸರು ಹೇಳಿದ್ದಾರೆ. ಉತ್ತರ ಭಾರತದವರು ದಕ್ಷಿಣ ಭಾಗದವರನ್ನು ಆರಿಯಾ ಎಂದು ಕರೆಯುತ್ತಿದ್ದರು. ಅಂತೆಯೇ ವಿಜಯನಗರ ಸಾಮ್ರಾಜ್ಯದಲ್ಲಿ ಅರೆವಾಸಿಗರೆಂಬ ಜನಾಂಗವೊಂದಿತ್ತು ಎಂದು ಚರಿತ್ರೆಯಿಂದ ತಿಳಿದು ಬಂದಿದೆ. ಸಂಸ್ಕೃತ ತದ್ಭವಗಳ ಉಚ್ಚಾರಣೆ ಯಿಂದ "ಅರೆಬಾಸೆ"ಯಾಗಿರಬಹುದು. ಈ ಅರೆಬಾಸಿಕ ಜನಾಂಗದವರು ವಿಜಯನಗರದ ಅರಸನಿಗೆ ಆಪ್ತರಾಗಿ ರಾಜರಿಗೆ ಸಹಾಯಕರಾಗಿದ್ದು, ನಂತರ 1565ರಲ್ಲಿ ತಾಳಿಕೋಟೆ ಯುದ್ಧದಲ್ಲಿ ವಿಜಯನಗರವು ಸರ್ವನಾಶ ವಾದಾಗ ಅಳಿದುಳಿದ ಅರೆವಾಸಿ ಜನಾಂಗವು ದಕ್ಷಿಣಕ್ಕೆ ಬಂದರೆಂದು, ಶೃಂಗೇರಿಯಲ್ಲಿ ಆಶ್ರಯ ಪಡೆದರೆಂದು ಸಂಗಾತಿಯ ಅವಗಾಹನೆಗೆ ಬಂದಿರುತ್ತದೆ.

ಈ ಮೇಲಿನ ಟಿಪ್ಪಣೆಗೆ ಸಂಬಂಧಿಸಿದಂತೆ ಸಂಶೋಧನೆ ನಡೆಸಿದಲ್ಲಿ ಖಂಡಿತವಾಗಿಯೂ ಹೆಚ್ಚಿನ ಮಾಹಿತಿಗಳು ಲಭ್ಯವಾಗುವುದರಲ್ಲಿ ಎರಡು ಮಾತಿಲ್ಲ. ಹತ್ತು ಕುಟುಂಬ ಹದಿನೆಂಟು ಗೋತ್ರದ ಬಗ್ಗೆ ಮತ್ತು ಅರೆಬಾಸೆ ಬಗ್ಗೆ ಪೂರ್ಣ ಪ್ರಮಾಣದ ಸಂಶೋಧನೆ, ಪ್ರಬಂಧ ಮಂಡನೆ ಇತ್ಯಾದಿಗಳು ನಡೆಯಬೇಕು. ಈ ಬಗ್ಗೆ ವಿಚಾರಗಳು, ಚಿಂತನೆಗಳು, ವಿಮರ್ಶೆ ಗಳು ಆಗಾಗ ಅಲ್ಲಲ್ಲಿ ನಡೆಯುತ್ತಿರಬೇಕು. ಸಾಹಿತ್ಯ ಇದರ ಬಗ್ಗೆ ಹೆಚ್ಚಿನ ಆಸಕ್ತಿ ನಮ್ಮವರಿಗಿಲ್ಲದಿರುವುದು ಖೇದಕರ ಸಂಗತಿ.

ಭಾಷೆ ಬಗ್ಗೆ ಪ್ರೊ. ಕೋಡಿ ಕುಶಾಲಪ್ಪಗೌಡರು ಮತ್ತು ಸಂಸ್ಕೃತಿ ಬಗ್ಗೆ ಡಾ|| ಪುರುಶೋತ್ತಮ ಬಿಳಿಮಲೆಯವರು ಅಧ್ಯಯನವನ್ನು ಈ ಹಿಂದೆ ನಡೆಸಿದ್ದಾರೆ. ಆದರೆ ಸಾಲದು. ಇನ್ನು ಇದಕ್ಕಿಂತಲೂ ಹೆಚ್ಚಿನ ಅಧ್ಯಯನ ಆಗಬೇಕಿದೆ. ಅಂದರೆ ಅರೆಬಾಸಿಕರ ಅಥವಾ ಹತ್ತು ಕುಟುಂಬ ಹದಿನೆಂಟು ಗೋತ್ರದ ಮೂಲದವರೆಗೂ ಹೋಗಲು ಈ ತನಕ ಯಾರಿಗೂ ಸಾಧ್ಯ ವಾಗಿರುವುದಿಲ್ಲ. ಏಳೆಂಟು ಶತಮಾನಗಳ ಹಿಂದೆ ನಡುಗನ್ನಡವೇ ಕನ್ನಡ ನಾಡಿನ ಭಾಷೆಯಾಗಿತ್ತು. ಅದೇ ನಡುಗನ್ನಡವೆ ಇಂದು ಅರೆಭಾಷೆಯಾಗಿ, ಪಳೆಯುಳಿಕೆಯಾಗಿ ಉಳಿದಿದೆ ಎನ್ನುವ ಸತ್ಯಾಂಶವನ್ನು ನಾವು ಮೊದಲು ಅರಿಯಬೇಕು. ಹೊಸಗನ್ನಡವು ಪ್ರತ್ಯೇಕವಾಗಿ ಸಾಹಿತ್ಯ ಲೋಕದಲ್ಲಿ ಬರವಣಿಗೆಯ ರೂಪದಲ್ಲಿ ವಿಜೃಂಭಿಸಿದಾಗ ಅದಕ್ಕೆ ಹೆಚ್ಚಿನ ಪ್ರೋತ್ಸಾಹ ಸಿಕ್ಕಿ ಅದೇ ಮುಂದುವರಿಯಲು ಸಾಧ್ಯವಾಯಿತು. ಸಂಧಿ, ಸಮಾಸ, ವ್ಯಾಕರಣಗಳು ಇರುವುದೆ ಹೊಸಗನ್ನಡದಲ್ಲಿ. ಸಂಧಿ, ಸಮಾಸ ವ್ಯಾಕರಣ ಇಲ್ಲದಿರುವುದೆ ನಡುಗನ್ನಡದಲ್ಲಿ (ಅರೆಬಾಸೆ)

ಹತ್ತು ಕುಟುಂಬ ಹದಿನೆಂಟು ಗೋತ್ರದ ಅರೆಭಾಷೆ ಗೌಡರ ಮದುವೆಯ ಸೀತಾವಳಿ ಚಪ್ಪರಕ್ಕೆ 12 ಕಂಬಗಳನ್ನು ನೆಡುವುದಿದೆ. ಈ ತರಹ ಭಾರತದ ಬೇರೆ ಎಲ್ಲೂ ಕಾಣಸಿಗುವುದಿಲ್ಲ. ಆದರೆ ಸರ್ವನಾಶವಾದ ಹಂಪೆಯಲ್ಲಿ ಕಲ್ಲಿನ ಕಂಬದಲ್ಲಿ ನೆಡಲ್ಪಟ್ಟ ಸೀತಾವಳಿ ಚಪ್ಪರವು ಇರುವುದನ್ನು ಈಗಲೂ ಕಾಣಬಹುದು. ಅಂದ ಮೇಲೆ ಹಂಪಿಗೂ ಈ ಅರೆವಾಸಿ ಜನಾಂಗಕ್ಕೂ, ಅರೆ ಭಾಷಿಕರಿಗೂ, ಅರೆಭಾಷೆಗೂ, ಹತ್ತು ಕುಟುಂಬ ಹದಿನೆಂಟು ಗೋತ್ರದವರಿಗೂ ಹತ್ತಿರದ ನೆಂಟಸ್ಥವಿದೆಯೆಂದು ಭಾವಿಸಬೇಕು. ಈ ಬಗ್ಗೆ ಉತ್ಪನ್ನವಾಗಲಿ ಆಗ ತಿಳಿಯುವುದು ಅರೆಭಾಷೆಯ ಮಹತ್ವ. ಬಹಳ ಹಿಂದಿನ ಗೌಡರ ವ್ಯವಹಾರ ಅವಲೋಕಿಸಿದಾಗ "ಹಾಲಕ್ಕಿ ಒಕ್ಕಲು ಯಾನೆ ಗೌಡರು" ಎಂಬ ಪದ ಬಳಕೆಯಲ್ಲಿರುವುದು ಕಂಡು ಬರುತ್ತದೆ.

ಅರೆ ಭಾಷೆಯು ಗೌಡರಿಗೆ ಮಾತ್ರ ಸೀಮಿತವಾದ ಭಾಷೆಯಲ್ಲ. ಇದನ್ನು ಹತ್ತು ಕುಟುಂಬ ಹದಿನೆಂಟು ಗೋತ್ರದ ಅರೆಭಾಷೆ ಗೌಡರು, ಹವ್ಯಿಕ ಬ್ರಾಹ್ಮಣರು, ಸೋಲಿಗರು, ಕುಂಬಾರರು, ಹಾಲಕ್ಕಿ ವಕ್ಕಲಿಗರು, ಕೋಟದವರು ಅಲ್ಲದೆ ಮಲೆನಾಡಿನ ಹಲವು ಜನರು ಕನ್ನಡದ ರೂಪಾಂತರ ಈ ನಡುಗನ್ನಡದ ಪದ ಪ್ರಯೋಗವು ಅಲ್ಲಲ್ಲಿ ಉಳಿದಿರುವುದನ್ನು ನಾವು ಕಾಣಬಹುದು. ಉದಾ: "ಮಂಞ" (ಮಗ), ಅಂಬ್ರುಸು (ಒತ್ತು) ಇತ್ಯಾದಿ ಪದಗಳು ಇಂದು ಮಂಡ್ಯ ಜಿಲ್ಲೆಯ ಮಹದೇವ ಪುರದಲ್ಲಿ ಕಾಣಬಹುದು. ಹಾಗೆಯೇ ರಾಮಪ್ಪ ಭೀಮಪ್ಪ ಅಯ್ಯೆಟಿ, ಮೂಯೆಟ್ಟಿ ಎಂಬ ಹೆಸರು ಈಗಲೂ ಬೆಳಗಾಂ ಜಿಲ್ಲೆಯ ಪಾರಿಸ್ವಾಡ ಗ್ರಾಮದಲ್ಲಿದೆ. ಅಂತೆಯೇ " ಕುಕ್ಕುನೂರು" ಪದವು ಹಂಪೆಯಿಂದ ಬಿಜಾಪುರಕ್ಕೆ ಹೋಗುವ ಒಂದು ಗ್ರಾಮದ ರಸ್ತೆ ಬದಿಯಲ್ಲಿ ಕಲ್ಲಿನಲ್ಲಿ ನೆಟ್ಟಿರುವುದನ್ನು ಕಾಣುತ್ತೇವೆ. ಹಂಪಿಯಲ್ಲಿ 12 ಕಂಬಗಳ ಸೀತಾವಳಿ ಚಪ್ಪರ ಇವೆಲ್ಲಾ ಜನಾಂಗಕ್ಕಿರುವ ಮೂಕ ಸಾಕ್ಷಿಗಳಲ್ಲವೆ? ಗೌಡ ಅಕಾಡೆಮಿ ಈ ನಿಟ್ಟಿನಲ್ಲಿ ಶೀಘ್ರ ಕಾರ್ಯ ಪ್ರವರ್ತರಾಗುವುದು ಶ್ರೇಯಸ್ಕರ.

ಕನ್ನಡದಲ್ಲಿ ಹಳೆಗನ್ನಡ, ನಡುಗನ್ನಡ, ಹೊಸಗನ್ನಡ ವೆಂಬುದಾಗಿ ವರ್ಗೀಕರಣವಾಗಿರುತ್ತದೆ. ನಡುಗನ್ನಡವು ಹೊಸಗನ್ನಡಕ್ಕೆ ಪರಿವರ್ತನೆಯಾಗಿ ರೂಪಾಂತರ ಗೊಂಡಾಗ ನಡುಗನ್ನಡ ತನ್ನ ಅಸ್ತಿತ್ವವನ್ನು ಕಳೆದುಕೊಂಡು ಕರ್ನಾಟಕದ ಪಶ್ಚಿಮ ಭಾಗದ ಬೆಟ್ಟಗುಡ್ಡ ಪ್ರದೇಶದಲ್ಲಿ ಸಂಪರ್ಕ ಕೊರತೆಯಿಂದ ಇಲ್ಲಿಯೇ ಉಳಿಯುವಂತಾಯಿತು. ಅಂದಿನ ವಿದ್ವಾಂಸರು ಹೊಸ ಹೊಸ ಪ್ರಯೋಗದೊಂದಿಗೆ ಹೊಸ ಗನ್ನಡಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಿದಾಗ ಬಯಲು ಸೀಮೆಯಲ್ಲಿ ಹೊಸಗನ್ನಡವು ಹೆಚ್ಚಿನ ಪ್ರಚಾರಕ್ಕೆ ಬಂತು. ಹೊಸಗನ್ನಡವು ಬಯಲು ಸೀಮೆಯಲ್ಲಿ ಹೆಚ್ಚು ಪ್ರಚಾರವಾಗ ತೊಡಗಿದಾಗ ಅದಕ್ಕೆ ಪಂಡಿತ ಮಹಾಶಯರ ಕೃಪಾಕಟಾಕ್ಷೆಯಿಂದ ಹೆಚ್ಚಿನ ಶಕ್ತಿ ಬಂತು. ನಡುಗನ್ನಡವು ಬೆಟ್ಟ ಪ್ರದೇಶಗಳಲ್ಲಿ ಅರೆಭಾಸೆಯೆಂಬ ನಾಮದಿಂದ ಉಳಿದುಕೊಂಡು ನಂತರ ಕಾಲಕ್ರಮೇಣ ಹವಿಕ

ಗನ್ನಡ, ಕೋಟಗನ್ನಡ, ಗೌಡಗನ್ನಡವಾಗಿ ಪ್ರಾದೇಶಿಕವಾಗಿ ಉಳಿದು ಇಂದಿಗೂ ಪ್ರಚಲಿತದಲ್ಲಿವೆ. ಗೌಡ ಗನ್ನಡವೆಂದು ಇತ್ತೀಚೆಗೆ ಪ್ರೊ|| ಕೋಡಿ ಕುಶಾಲಪ್ಪಗೌಡರ ಲೇಖನಗಳಲ್ಲಿಯೂ ಅಲ್ಲದೆ ಅದಕ್ಕಿಂತ ಹಿಂದೆ ಪ್ರೊ|| ಮರಿಯಪ್ಪ ಭಟ್ಟರು ಮೊದಲ ಬಾರಿ ಪ್ರಯೋಗಿಸಿದ್ದಾರೆ. ಏನಿದ್ದರು ಹೊಸಗನ್ನಡವು ನಡುಗನ್ನಡವೇ ಆಗಿದ್ದು ಅದರ ಪಳೆಯುಳಿಕೆಯೇ ಅರೆಬಾಸೆಯಾಗಿ ಉಳಿದು ಮಾರ್ಪಟ್ಟು ಪಶ್ಚಿಮಘಟ್ಟ, ಮಲೆನಾಡು ಪ್ರದೇಶಗಳಲ್ಲಿ ಉಳಿದಿದೆಯೆನ್ನಬಹುದು. 6ಸಾವಿರ ವರ್ಷಗಳ ಹಿರಿತನವು ಕನ್ನಡಕ್ಕಿದೆಯೆಂದೂ ಈ ಹಿಂದೆ ಪ್ರೊ|| ಶಂಬಾ ಜೋಷಿಯವರ ಲೇಖನವನ್ನು ಸಂಗಾತಿಯು ಓದುಗರಿಗಾಗಿ ನೀಡಿತ್ತು. ತಮಿಳಿನಲ್ಲಿ ಈಗಲೂ 32 ಅಕ್ಷರಗಳೇ ಇವೆ. ಪ್ರೊ|| ಕೋಡಿ ಕುಶಾಲಪ್ಪಗೌಡರ ಲೇಖನದ ಪ್ರಕಾರ ಅರೆಭಾಷೆಯಲ್ಲಿ (ಅರೆಬಾಸೆ) 32 ಅಕ್ಷರಗಳು ಇವೆ. ಇವೆರಡು ಸಮಾನಾಂತರ ಭಾಷೆಗಳು. ತನ್ನ ಮೂಲ ಹಿರಿತನವನ್ನು ತನ್ನಲ್ಲೆ ಉಳಿಸಿಕೊಂಡಿವೆ. ಹೊಸಕನ್ನಡದ ಹಿರಿಯಣ್ಣನೆ ಈ ಅರೆಭಾಷೆಯೆನ್ನಲು ಅಡ್ಡಿಯಿಲ್ಲ. ಹೊಸಗನ್ನಡದಲ್ಲಿ 54 ಅಕ್ಷರಗಳು, ಮಲೆಯಾಳಂನಲ್ಲಿ 56 ಅಕ್ಷರಗಳು, ತೆಲುಗಿನಲ್ಲಿ 54 ಅಕ್ಷರಗಳಿದ್ದು ಇವೆಲ್ಲವು ನಂತರದಲ್ಲಿ ಬಳಕೆಯಲ್ಲಿ ಬಂದವುಗಳು. ಹಾಗಾಗಿ 32 ಅಕ್ಷರಗಳ ವ್ಯಾಪ್ತಿಯಲ್ಲಿ ಒಳಪಡುವ ಕನ್ನಡವೇ ಅರೆಭಾಷೆ(ಅರೆಬಾಸೆ)ಯಾಗಿ ಇಂದಿಗೂ ಹಲವು ಜನಾಂಗದವರಿಂದ ಮಾತನ್ನಾಡಿಸುತ್ತಿದೆ. ಅದರಂತೆ ಅರೆಭಾಷೆ ಸಂಶೋಧನ ಕೇಂದ್ರವನ್ನು ಸ್ಥಾಪಿಸಿ ಸಂಶೋಧನೆ ನಡೆಸಿದಾಗ ನಶಿಸಿ ಹೋದ ಒಂದು ವಿಶಿಷ್ಟ ಸಂಸ್ಕೃತಿ ಮತ್ತು ಭಾಷೆ (ಬಾಸೆ) ಯು ಹೊರಹೊಮ್ಮುವುದೆಂದು ಸಂಗಾತಿಯ ಅನಿಸಿಕೆಯಾಗಿದೆ. ಈ ಮೇಲಿನ ವಿಚಾರವು ಸಂಗಾತಿಗೆ ತಿಳಿದು ಬಂದಿದೆಯಾದರು ಈ ಬಗ್ಗೆ ಉತ್ಪನ್ನ ತೀರಾ ಅವಶ್ಯಕ. ಶಂಖದಿಂದ ನೀರು ತೀರ್ಥ ರೂಪದಲ್ಲಿ ಬಂದರೇನೆ ಅಲ್ಲವೇ ತೀರ್ಥವಾಗುವುದು.

---

# ಅಳುವ ಮಗುವಿಗೊಂದು ಆಸರೆ ಬಿದ್ದಂಡ ಮನೆ ಆದಿ ಶಕ್ತಿ ಮಹಾತ್ಮೆಯೆಂಬುದು ಜನರ ನಂಬಿಕೆ.

'ಚಿಕ್ಕಮಗು ದೇವರ ಸಮಾನ' ಎನ್ನುತ್ತಾರೆ. ಅದು ತನ್ನ ನಗುವಿನಿಂದ ಮನೆಮಂದಿಯನ್ನೆಲ್ಲ ನಗಿಸುತ್ತದೆ. ಮಗು ನಕ್ಕರೆ ಸ್ವರ್ಗ, ಅತ್ತರೆ ನರಕವೇನಲ್ಲ, ಆದರೆ ಒಂದೇ ಸಮನೆ ಅತ್ತರೆ, ವಿಚಿತ್ರ ವರ್ತನೆಗಳೊಂದಿಗೆ ಅತ್ತರೆ, ಆಗ ಆರಂಭವಾಗುವುದು ಮನೆ ಮಂದಿಗೆಲ್ಲ ನರಕಯಾತನೆ. ಮಗು ಯಾಕೆ ಅಳುತ್ತಿದೆ. ಎನ್ನುವುದನ್ನು ಅರ್ಥಮಾಡಿಕೊಳ್ಳುವುದು ಕಷ್ಟ. ವೈದ್ಯರಲ್ಲಿಗೆ ಹೋದರೂ, ಔಷಧಿಕೊಟ್ಟರೂ ಮಗು ಅಳುವುದನ್ನು ಮುಂದುವರಿಸಿದರೆ ಅದಕ್ಕೆ 'ಬಾಲಗ್ರಹ'ಎನ್ನುತ್ತಾರೆ. ಇದಕ್ಕೆಲ್ಲ ತೈಲ, ತಾಯಿತ ಮೊದಲಾದವುಗಳನ್ನು ಮಾಡಿಸಿಕೊಂಡರೂ ಫಲಕಾರಿ ಯಾಗದೆ ಹಲವರು ನಿಸ್ಸಹಾಯಕರಾಗಿರುತ್ತಾರೆ. ಆದರೆ ಈ ತೈಲ, ತಾಯಿತಗಳಲ್ಲದೆ, ದೈವೀ ಪ್ರಸಾದವೆಂಬಂತೆ ನಾಟಿ ಔಷಧಿಯನ್ನು ಮಗುವಿಗೆ ಉಣಿಸಿ, ಅದನ್ನು ರೋಗಮುಕ್ತಗೊಳಿಸುವ ವ್ಯವಸ್ಥೆ ಬಾವಲಿ ಗ್ರಾಮದ ಬಿದ್ದಂಡ ಮನೆಯಲ್ಲಿದೆ. ನಮ್ಮ ಓದುಗರಿಗೆ ಅನುಕೂಲವಾಗಲೆಂಬ ದೃಷ್ಟಿಯಿಂದ ಈ ಮಾಹಿತಿ ನಿಮ್ಮ ಮುಂದಿಡುತ್ತಿದ್ದೇವೆ.

ನಾಪೋಕ್ಲುವಿನಿಂದ ಪಾರಾಣೆಗೆ ಸಾಗುವ ಮಾರ್ಗಮಧ್ಯೆ ಬಾವಲಿ ಗ್ರಾಮ ಸಿಗುತ್ತದೆ. ಆ ಕಡೆ ಸಾಗುವ ಬಸ್ಸನ್ನು ಹತ್ತಿ ಬಿದ್ದಂಡ ಮನೆ ಎಂದರೂ ಸಾಕು, ಬಸ್ಸಿನವರು ನಿಮ್ಮನ್ನು ಅಲ್ಲೇ ಇಳಿಸುತ್ತಾರೆ. ಇಲ್ಲಿ ವಾರದ ಭಾನುವಾರ ಮತ್ತು ಗುರುವಾರ ದಿನ ಮಾತ್ರ ಔಷಧಿ ಕೊಡಲಾಗುತ್ತದೆ. ಔಷಧಿಗೆ ಹೋಗುವವರು ಕ್ರಮವಾಗಿ ಮೂರು ಸಲ ಹೋಗಬೇಕು. ಮತ್ತು ಈ ಪೂರ್ಣಾವಧಿ ಶುದ್ಧ ಮುದ್ರಿಕೆಯಿಂದ ಇರಬೇಕು. ಬಹು ಪ್ರಾಚೀನ ಕಾಲದಿಂದಲೂ ಈ ಮನೆಯಲ್ಲಿ ನಾಟಿಔಷಧಿ ಕೊಡುವ ವ್ಯವಸ್ಥೆಯಿತ್ತು. ಇತ್ತೀಚೆಗೆ ಹನ್ನೆರಡು ವರ್ಷಗಳಿಂದೀಚೆಗೆ ಈ ಔಷಧಿ ಕೊಡುವವರ ಮೈಮೇಲೆ ಆದಿ ಶಕ್ತಿ ದೇವರು ಬರುತ್ತದೆಂಬುದು ಜನರ ನಂಬಿಕೆ. ಹೀಗೆ ದೇವರು ಮೈಮೇಲೆ ಬಂದು ಕೊಡುವ ಔಷಧಿ ಸೇವಿಸಿದ ಮೇಲೆ ಮಗು ಆರೋಗ್ಯದಿಂದ ನಳನಳಿಸುತ್ತದೆಂಬುದು ಇಲ್ಲಿಗೆ ಬರುವವರ ದೃಢವಾದ ನಂಬಿಕೆ.

ಇಲ್ಲಿ ಕೇವಲ ಚಿಕ್ಕಮಗುವಿಗೆ ಮಾತ್ರ ಔಷಧ ಕೊಡುವುದಲ್ಲ. ಇತರ ಕಾಯಿಲೆಗಳಿಗೂ, ವಯಸ್ಸಾದವರಿಗೂ ಔಷಧ ಕೊಡಲಾಗುತ್ತದೆ. ಅದೂ ಸಹ ಭಾನುವಾರ ಮತ್ತು ಗುರುವಾರ ಹತ್ತು ಗಂಟೆಯೊಳಗೆ ಯಾವ ಆಹಾರವನ್ನೂ ಸೇವಿಸದೆ ಹಸಿ ಔಷಧಿ ಸೇವಿಸಬೇಕಾಗುತ್ತದೆ. ಕ್ಯಾನ್ಸರ್‌ನಂತಹ ಕಾಯಿಲೆಗಳನ್ನೂ ಸಹ ಇಲ್ಲಿಗೆ ಬಂದು ಗುಣಪಡಿಸಿಕೊಂಡವರಿದ್ದಾರೆ ಎಂದು ಜನ ಹೇಳುತ್ತಾರೆ. ಜೀವನದಲ್ಲಿ ಒಮ್ಮೆಯಾದರೂ ತಮ್ಮ ಮಕ್ಕಳಿಗೆ ಇಲ್ಲಿಗೆ ಹೋಗಿ ಔಷಧಿ ಹಾಕಿಸಿಕೊಂಡರೆ ಒಳಿತಾಗುತ್ತದೆ ಎಂದೇ ಹಲವರು ನಂಬಿದ್ದಾರೆ. ದೇವರಿಗೆ ಒಂದು ತೆಂಗಿನ ಕಾಯಿ, 100ಗ್ರಾಂ ಬೆಣ್ಣೆ ಮತ್ತು 10ರೂ. ಕಾಣಿಕೆ ಸಲ್ಲಿಸಿ, ದೇವಿಪ್ರಸಾದ ರೂಪದಲ್ಲಿ ಔಷಧಿ ಸೇವಿಸಿ ಜೀವನ ಸಾರ್ಥಕತೆ ಪಡೆಯಲು ಇಲ್ಲಿಗೆ ಎಲ್ಲಾ ಜಾತಿಗಳ ಜನರಲ್ಲದೆ ಮುಸ್ಲಿಂ, ಕ್ರೈಸ್ತ ಧರ್ಮಗಳ ಜನರೂ ನಿಗದಿತ ದಿನದಂದು ನೂರಾರು ಸಂಖ್ಯೆಯಲ್ಲಿ ಇಲ್ಲಿಗೆ ಆಗಮಿಸುತ್ತಾರೆ. ಇಲ್ಲಿಗೆ ಆಗಮಿಸುವ ಜನರ ಸಂಖ್ಯೆ ಮತ್ತು ಅವರಾಡುವ ಮಾತುಗಳನ್ನು ಗಮನಿಸಿದರೆ ಇಲ್ಲಿ ಕೊಡುವ ನಾಟಿ ಔಷಧಿ ನಿಜಕ್ಕೂ ಸಂಜೀವಿನಿಯಂತಹ ಪರಿಣಾಮವನ್ನುಂಟು ಮಾಡಬಲ್ಲದು ಎಂಬುದು ಸಂಗಾತಿಯ ನಂಬಿಕೆಯಾಗಿದೆ.

— ಸಂಗಾತಿ

---

ಗಾದೆ ವೇದಕ್ಕೆ ಸಮ.

# ಭಾರತದ ಬಾಕ್ಸಿಂಗ್ ರಂಗದಲ್ಲಿ ಮಿಂಚಿ ಮರೆಯಾದ ಗೌಡ ಕುವರ ಪಾರೆಮಜಲು ಪುಟ್ಟಯ್ಯ ಕುಸುಮಾ ಕಾರ್ಯಪ್ಪ.



ಗೌಡಜನಾಂಗದಲ್ಲಿ ಹಲವು ಪ್ರತಿಭೆಗಳಿದ್ದರೂ ಅವು ಅರಳುವ ಮುಂಚೆಯೇ ಕಮರಿ ಹೋಗುವವೇ ಹೆಚ್ಚು. ಗೌಡ ಜನಾಂಗದಲ್ಲಿ ಮಡುಗಟ್ಟಿರುವ ಅಸೂಯೆ, ಹಿಂಜರಿತನ, ಕಾಲೆಳೆಯುವ ಬುದ್ಧಿ, ಮುನ್ನಡೆಯುವವನನ್ನು ಪ್ರೋತ್ಸಾಹಿಸದೇ ಇರುವ ಗುಣ, ಉನ್ನತ ಸ್ಥಾನದಲ್ಲಿದ್ದರೂ ಜನಾಂಗ ಬಂಧುಗಳಿಗೊಂದಿಷ್ಟು ಸಹಾಯ ಮಾಡುವ ಮನೋಭಾವನೆಯ ಕೊರತೆ ಇವೇ ಮೊದಲಾದ ಕಾರಣಗಳಿಂದಾಗಿಯೇ ನಿರಂತರವಾಗಿ ನಮ್ಮ ಜನಾಂಗ ಹಿಮ್ಮುಖವಾಗಿ ಚಲಿಸಬೇಕಾಗಿದೆ. ತತ್ಪರಿಣಾಮವಾಗಿಯೇ ಜನಾಂಗದ ಹಲವು ಎಲೆಮರೆ ಕಾಯಿಗಳು ಮರೆಯಲ್ಲೇ ಉದುರಿ ಹೋಗಿವೆ. ಹೀಗೆಯೇ ಭಾರತದ ಬಾಕ್ಸಿಂಗ್ ರಂಗದಲ್ಲಿ ಮಿಂಚಿ ಉನ್ನತ ಸ್ಥಾನಕ್ಕೇರಿ, ಒಲಂಪಿಕ್ಸ್‌ನಲ್ಲಿ ಭಾಗವಹಿಸುವಷ್ಟು ಅರ್ಹತೆ ಪಡೆದುಕೊಂಡಿದ್ದರೂ, ದುಷ್ಟ ರಾಜಕೀಯದಿಂದಾಗಿ ದೂರ ತಳ್ಳಪ್ಪಟ್ಟು, ಪ್ರೋತ್ಸಾಹದ ಕೊರತೆಯಿಂದ ನಲುಗಿ, ಬಾಕ್ಸಿಂಗ್ ರಂಗದಿಂದ ಮರೆಯಾಗಿ ಸ್ವಂತ ಉದ್ಯೋಗದಲ್ಲಿ ತೊಡಗಿಕೊಂಡಿರುವ ವ್ಯಕ್ತಿ ಪಾರೆಮಜಲು ಪುಟ್ಟಯ್ಯ ಕುಸುಮಾ ಕಾರ್ಯಪ್ಪನವರು. ಇಂತಹವರನ್ನು ನಮ್ಮ ಓದುಗರಿಗೆ ಪರಿಚಯಿಸಲು ಅವರೊಡನೆ ಮಾತಿಗಿಳಿದಾಗ ಅವರಾಡಿದ ಬಿಚ್ಚುನುಡಿಗಳನ್ನು ನಿಮ್ಮ ಮುಂದಿಡುತ್ತಿದ್ದೇವೆ.

**ಕೊ. ಸಂ. :** ನಮ್ಮ ಓದುಗರಿಗೆ ನಿಮ್ಮ ಪರಿಚಯ ತಿಳಿಸುವಿರಾ?

**ಉ :** ನಾನು ಮುತ್ತಾರ್ಮುಡಿ ಗ್ರಾಮದ ಪಾರೆಮಜಲು ದಿ. ಪುಟ್ಟಯ್ಯ ಹಾಗೂ ಬೆಂಗಳೂರಿನ ನ್ಯಾಷನಲ್ ಕಾಲೇಜಿನಲ್ಲಿ ಪದವಿಯನ್ನು ಪಡೆದೆನು.

**ಕೊ. ಸಂ. :** ತಾವು ಬಾಕ್ಸಿಂಗ್ ರಂಗಕ್ಕಿಳಿಯಲು ಕಾರಣ ಹಾಗೂ ಪ್ರೇರಣೆ ಏನು?

**ಉ :** ನಾನು ಬೆಂಗಳೂರಿನಲ್ಲಿ ವಿದ್ಯಾಭ್ಯಾಸ ಮಾಡುವ ಸಂದರ್ಭದಲ್ಲಿ ವಾಲಿಬಾಲ್ ಆಯ್ಕೆಗಾಗಿ ತೆರಳಿದ್ದೆ. ಆಗ ಅಲ್ಲಿ ವಿಪರೀತ ರಾಜಕೀಯ ನಡೆದು ನನಗೆ ಅವಕಾಶ ಸಿಗಲಿಲ್ಲ. ಇಂತಹ ಸಮೂಹ ಕ್ರೀಡೆಗಳಲ್ಲಿ ಸಾಮಾನ್ಯವಾಗಿ ರಾಜಕೀಯ ನಡೆಯುವುದರಿಂದ ವೈಯಕ್ತಿಕ ಸಾಧನೆ ಮಾಡಬೇಕೆಂಬ ಉದ್ದೇಶದಿಂದ ಬಾಕ್ಸಿಂಗ್ ಕಣಕ್ಕೆ ಇಳಿದೆ. ಆಗ ಕ್ರೀಡಾ ತರಭೇತುದಾರರಾಗಿದ್ದ ಈಗ ಮಡಿಕೇರಿಯಲ್ಲಿ ಕ್ರೀಡಾಧಿಕಾರಿಯಾಗಿರುವ ಅಪ್ಪಚ್ಚುರವರ ಪ್ರೋತ್ಸಾಹ ನನಗೆ ದೊರಕಿ ನಾನು ಈ ಕ್ಷೇತ್ರದಲ್ಲಿ ಮುನ್ನಡೆಯಲು ಸಾಧ್ಯವಾಯಿತು.

**ಕೊ. ಸಂ.:** ಬಾಕ್ಸಿಂಗ್ ರಂಗದಲ್ಲಿ ತಮ್ಮ ಸಾಧನೆ ಏನು?

**ಉ:** ನಾನು ಸತತ 5ವರ್ಷ ಗಳ ಕಾಲ ಲೈಟ್‌ವೇಟ್ ಬಾಕ್ಸಿಂಗ್ ವಿಭಾಗದಲ್ಲಿ ಚಾಂಪಿಯನ್ ಆಗಿದ್ದೇನೆ. ಅಲ್ಲದೆ ಸತತ 5ವರ್ಷ ಕರ್ನಾಟಕವನ್ನು ರಾಷ್ಟ್ರಮಟ್ಟದಲ್ಲಿ ಪ್ರತಿನಿಧಿಸಿದ್ದೇನೆ. ರಾಜ್ಯ ಮತ್ತು ರಾಷ್ಟ್ರಮಟ್ಟದಿಂದ ಒಟ್ಟು 8ಬಾರಿ ಪ್ರಶಸ್ತಿಗಳನ್ನು ಪಡೆದಿದ್ದೇನೆ.

**ಕೊ. ಸಂ. :** ಮತ್ತೆ ತಾವೇಕೆ ಬಾಕ್ಸಿಂಗ್ ರಂಗದಿಂದ ದೂರ ಸರಿದಿರಿ?

**ಉ :** ನಾನು ಬಾಕ್ಸಿಂಗ್ ರಂಗದಿಂದ ದೂರ ಸರಿಯಲಿಲ್ಲ. ನಾನು 'ಗೌಡ' ಎನ್ನುವ ಏಕೈಕ ಕಾರಣದಿಂದ ನನ್ನನ್ನು ದೂರ ಸರಿಸಲಾಯಿತು. ಆಗ ದ. ವಲಯ ಕ್ರೀಡಾ ನಿರ್ದೇಶಕರ ದುಷ್ಟ ರಾಜಕೀಯದಿಂದ ನಾನು ದೂರ ತಳ್ಳಲ್ಪಟ್ಟೆ. ಈ ಸಂದರ್ಭದಲ್ಲಿ ನನಗೆ ನನ್ನ ಜನಾಂಗದಿಂದಲೂ ಯಾವುದೇ ಪ್ರೋತ್ಸಾಹ, ಸಹಕಾರ ದೊರಕಲಿಲ್ಲ. ನನ್ನ ಪ್ರತಿಭೆಯನ್ನು ವೃಥಾ ಹತ್ತಿಕ್ಕಲಾಯಿತು. ನಂತರ ಭಾರತೀಯ ಸೇನೆಗೂ ನೇರ ಹಲಾವಲ್ದಾರ್ ಆಗಿ ಸೇರ್ಪಡೆಗೊಂಡೆ. ಅಲ್ಲಿಯೂ ನನಗೆ ಸೂಕ್ತ ಸ್ಥಾನಮಾನಗಳು ನಿರಾಕರಿಸಲ್ಪಟ್ಟಾಗ ಅದೆಲ್ಲವನ್ನು ಬಿಟ್ಟು, ಈಗ ಸ್ವ ಉದ್ಯೋಗದಲ್ಲಿ ತೊಡಗಿ ಕೊಂಡಿದ್ದೇನೆ. ನನ್ನ ಸಾಧನೆಗಳು ನನ್ನ ಪ್ರತಿಭೆಯನ್ನು ಅರಳಿಸಲಿಲ್ಲ ಬದಲಾಗಿ ವೃತ್ತಿ ಜೀವನವನ್ನು ಅರಳಿಸಿದೆ. ಒಟ್ಟಿನಲ್ಲಿ ನನಗೆ ಯಾವುದೇ ಪ್ರೋತ್ಸಾಹ ನೀಡದ ನನ್ನ ಜನಾಂಗದ ಬಗ್ಗೆ ನನಗೆ ಅಸಮಾಧಾನವಿದೆ.

**ಕೊ.ಸಂ. :** ನೀವೇ ಏಕೆ ಕ್ರೀಡಾ ಪ್ರತಿಭೆಗಳಿಗೆ ತರಬೇತು ನೀಡಿ ಪ್ರೋತ್ಸಾಹಿಸಬಾರದು?

**ಉ :** ಖಂಡಿತವಾಗಿ ಸಮಾಜ ಅದಕ್ಕೆ ಪೂರಕ ವ್ಯವಸ್ಥೆ ಕಲ್ಪಿಸಿದರೆ ನಾನು ನನ್ನ ಕೈಲಾದ ತರಬೇತಿ ಮತ್ತಿತರ ಸಹಾಯ ನೀಡಲು ಸದಾ ಸಿದ್ಧನಾಗಿದ್ದೇನೆ.

**ಕೊ. ಸಂ.:** ಇಂದು ನಮ್ಮ ಜನಾಂಗ ಹಲವಾರು ಕ್ಷೇತ್ರಗಳಲ್ಲಿ ತುಳಿತಕ್ಕೊಳಗಾಗುತ್ತಿದ್ದರೂ ಅದೆಲ್ಲವನ್ನು

---

ಜೀವನಧಾರಣೆಗೆ ಆಹಾರ ಅವಶ್ಯವಿದ್ದಂತೆ, ಬಾಳನ್ನು ಬೆಳಗಿಸಲು ಪುಸ್ತಕ ಒಂದು ಜ್ಯೋತಿಯಾಗಿದೆ — ಡಿ. ವಿ. ಗುಂಡಪ್ಪ.

ಮೌನದಿಂದ ಸಹಿಸಬೇಕಾಗಿದೆ. ನಮ್ಮ ಜನಾಂಗದ ರಕ್ಷಣೆಗೊಂದು ಸಂಘಟನೆಯ ಅವಶ್ಯಕತೆಯಿಲ್ಲವೆ? ಉದಾಹರಣೆಗೆ ದಲಿತರ ರಕ್ಷಣೆಗೆ ದಲಿತ ಸಂಘರ್ಷ ಸಮಿತಿ ಇದೆ., ಒಕ್ಕಲಿಗರ ರಕ್ಷಣೆಗೆ ಒಕ್ಕಲಿಗ ಹಿತರಕ್ಷಣಾ ಸಮಿತಿ ಇದೆ. ಹಾಗೆಯೇ ಗೌಡ ಸಂರಕ್ಷಣಾ ಸಮಿತಿಯನ್ನು ನಾವೇಕೆ ಕಟ್ಟಬಾರದು?

**ಉ :** ಇಂದು ಇಂತಹ ಒಂದು ಸಂಘಟನೆಯ ಅಗತ್ಯವಿದೆ. ಪರರ ಮೇಲೆ ಆಕ್ರಮಣಕ್ಕಲ್ಲ, ನಮ್ಮ ರಕ್ಷಣೆಗಾಗಿ ನಾವು ಗೌಡರ ಸಂರಕ್ಷಣಾ ಸಮಿತಿಯನ್ನು ಸ್ಥಾಪಿಸಲು ಪ್ರಯತ್ನಿಸುವುದು ಒಳ್ಳೆಯದು.

ಕಟ್ಟುಮಸ್ತಾದ ದೇಹವನ್ನು ಹೊಂದಿ ಇಂದಿಗೂ ಕೊಡಗಿನಲ್ಲೇ ಭಾರದಗುಂಡು ಎಸೆತದಲ್ಲಿ ಪ್ರಥಮ ಸ್ಥಾನವನ್ನು ಕಾಯ್ದುಕೊಂಡಿರುವ ಕುಸುಮಾ ಕಾರ್ಯಪ್ಪನವರು ಎನ್.ಪಿ.ಕೆ. ವುಡ್ ಇಂಡಸ್ಟ್ರೀಸ್‌ನ್ನು ಮುತ್ತಾರ್ಮುಡಿ ಗ್ರಾಮದಲ್ಲಿ ಸ್ಥಾಪಿಸಿಕೊಂಡು ಅದರ ಮೂಲಕ ಸ್ವಂತ ಉದ್ಯೋಗದಲ್ಲಿ ತೊಡಗಿದ್ದಾರೆ. ಕುಕ್ಕನೂರು ದಿ. ಪೊನ್ನಪ್ಪನವರ ಮಗಳು ಸೀಮಾಳನ್ನು ವಿವಾಹವಾಗಿರುವ ಇವರಿಗೆ ಭೂಮಿಕಾ ಎನ್ನುವ ಪುಟಾಣಿ ಮಗಳಿದ್ದಾಳೆ. ಇವರ ಕುಟುಂಬವೇ ಒಂದು ರೀತಿಯ ಕ್ರೀಡಾ ಕುಟುಂಬದಂತೆ. ಇವರ ತಾಯಿ ಮುತ್ತಾರ್ಮುಡಿ ಶಾಲೆಯಲ್ಲಿ ಶಿಕ್ಷಕಿಯಾಗಿದ್ದು, ಉತ್ತಮ ಶಿಕ್ಷಕಿ ಪ್ರಶಸ್ತಿ ಪಡೆದವರು ಅಲ್ಲದೆ ತಮ್ಮ 55ನೇ ವಯಸ್ಸಿನಲ್ಲಿ ಜಿಲಾ ಶಿಕ್ಷಕರ ಕ್ರೀಡಾಕೂಟದಲ್ಲಿ ಜಿಲ್ಲಾ ಚಾಂಪಿಯನ್ ಶಿಪ್ ಪಡೆದವರು. ಇವರ ತಂದೆ ಸೇನೆಯಲ್ಲಿ ಹವಾಲ್ದಾರ್ ಆಗಿ ಸೇವೆ ಸಲ್ಲಿಸಿದವರು. ಹೀಗೆ ಒಂದು ರೀತಿಯಲ್ಲಿ ಇವರದು ಸ್ಥಿತಿವಂತ ಕುಟುಂಬವೇ. ಆದರೂ ಕೂಡ ಇವರ ಪ್ರತಿಭೆಗೆ ತಕ್ಕ ಪುರಸ್ಕಾರ ಸಿಗಲಿಲ್ಲ ವೆಂದಾದಮೇಲೆ ಬಡಕುಟುಂಬಗಳಲ್ಲಿ ಜನಿಸಿದ ಅದೆಷ್ಟು ಪ್ರತಿಭೆಗಳು ತಾನೇ ಅರಳಲು ಸಾಧ್ಯ?

ಇಂದು ನಮ್ಮ ಜನಾಂಗ ಹಲವು ಸಂಕಷ್ಟಗಳನ್ನು ಎದುರಿಸುತ್ತಿದೆ. ನಮ್ಮಲ್ಲಿ ಸಂಘಟನೆಗೆ, ಸಂಸ್ಕೃತಿಯ ಅಭಿವೃದ್ಧಿಗೆ, ವಿದ್ಯಾಭಿವೃದ್ಧಿಗೆ, ಸಂಘಟನೆಯನ್ನು ಕೈಗೊಂಡಿದ್ದೇವೆ. ಆದರೆ ನಮ್ಮ ರಕ್ಷಣೆಗೊಂದು ಸಂಘಟನೆಯ ಅಗತ್ಯವಿದೆ. ಪಾರೆಮಜಲು ಕುಸುಮಾ ಕಾರ್ಯಪ್ಪರಂತಹವರ ಮೂಲಕ ಅಂತಹದೊಂದು ಸಂಘಟನೆಯನ್ನು ಹುಟ್ಟು ಹಾಕಲು ನಮ್ಮ ಸಮಾಜ ಶ್ರಮಿಸೀತೇ?

**— ಪಟ್ಟಡ ಶಿವಕುಮಾರ್**, ಉಪನ್ಯಾಸಕ, ನಾಪೋಕ್ಲು

---

## ಎರಡು ಫೋನ್‌ಗಳು ಒಂದು ಫೋನ್‌ಗಿಂತ ಅಗ್ಗವೇ?

ಮಾನ್ಯರೇ,

ಹೊಸಫೋನ್ ಸಂಪರ್ಕ ಈಗ ಬಹಳ ಬೇಗನೆ ದೊರೆಯುತ್ತಿರುವುದರಿಂದ, ಅನೇಕರು ತಮ್ಮ ಕರೆಗಳನ್ನು ಎರಡು ಫೋನ್‌ಗಳ ಮಧ್ಯೆ ಹಂಚಿ ಬಹಳಷ್ಟು ಹಣ ಉಳಿಸಬಹುದೆಂಬ ಲೆಕ್ಕಾಚಾರದಿಂದ ಎರಡನೆಯ ಫೋನನ್ನು ಬುಕ್ ಮಾಡಿದ್ದಾರೆ. ಆದರೆ ಈ ಲೆಕ್ಕಾಚಾರ ಸರಿಯಲ್ಲ. ಎರಡನೆಯ ಫೋನ್ ಇಟ್ಟುಕೊಳ್ಳುವುದರಿಂದ ಹೆಚ್ಚು ಉಳಿತಾಯ ಮಾಡಲು ಸಾಧ್ಯವಿಲ್ಲ.

ಫೋನ್‌ಗಾಗಿ ಎರಡು ತಿಂಗಳ ಬಾಡಿಗೆ 360 ರೂ.ಗಳು ಇದಕ್ಕಾಗಿ 150 ಕರೆಗಳು ಉಚಿತವಾಗಿ ಸಿಗುತ್ತವೆ. ಮುಂದಿನ 250 ಕರೆಗಳನ್ನು ತಲಾ 0.80ರೂ.ಗಳ ದರದಲ್ಲೂ, ಅದಾದ ಮೇಲಿನ 600 ಕರೆಗಳನ್ನು ತಲಾ 1ರೂ. ದರದಲ್ಲೂ ಬಿಲ್ ಮಾಡಲಾಗುತ್ತದೆ. ಅದರ ಮುಂದಿನ ಕರೆಗಳನ್ನು ಅಂದರೆ 1000ಕ್ಕೂ ಹೆಚ್ಚಿನ ಕರೆಗಳನ್ನು ತಲಾ 1.20ರೂ. ದರದಲ್ಲಿ ಬಿಲ್ ಮಾಡಲಾಗುತ್ತದೆ. ಆದ್ದರಿಂದ, 2000 ಕರೆಗಳಾದ ಮೇಲೆ, ಒಂದು ಫೋನಿನ ದರಕ್ಕೂ ಎರಡು ಫೋನುಗಳ ದರಕ್ಕೂ ವ್ಯತ್ಯಾಸವೇ ಇಲ್ಲ (ತಲಾ .20ದರ) ನೀವು 1800ಕರೆಗಳನ್ನು ಮಾಡಿ ಅವನ್ನು ಎರಡು ಫೋನುಗಳಿಗೆ ಸಮನಾಗಿ ಹಂಚಿದರೆ, ಎರಡು ಫೋನುಗಳ ಬಿಲ್ಲೂ 360+360+200+500+500 =2120ರೂ.) ಒಂದು ಫೋನಿನ ಬಿಲ್ಲೂ (360+200+600+800X 1.20 =2120 ರೂ.) ಸರಿಸಮವಾಗಿರುತ್ತವೆ. ಆದ್ದರಿಂದ ನೀವು 1801ನೆಯ ಕರೆಯಿಂದ 2000ನೆಯ ಕರೆಯವರೆಗೆ ಮಾತ್ರ ಉಳಿತಾಯ ಮಾಡಬಹುದು, ಮತ್ತು ಈ ಕರೆಗಳಿಗೆ ನಿಮ್ಮ ಉಳಿತಾಯ ಕೇವಲ 200 X 0.20=40 ರೂ., ಅಂದರೆ, ಒಂದು ಫೋನಿನ ಬದಲು ಎರಡು ಫೋನ್ ಇಟ್ಟುಕೊಳ್ಳುವುದರಿಂದ ನಿಮ್ಮ ಗರಿಷ್ಠ ಉಳಿತಾಯ ವರ್ಷಕ್ಕೆ ಕೇವಲ 240 ರೂ. ಗಳು.

ಎರಡನೆಯ ಫೋನಿಗಾಗಿ ನೀವು ಕೊಡಬೇಕಾದ 2000ರೂ. ಠೇವಣಿಯ ಮೇಲೆ ಸಿಗಬಹುದಾದ ಬಡ್ಡಿಯನ್ನೂ ಗಣನೆಗೆ ತೆಗೆದುಕೊಂಡರೆ ನಿಮ್ಮ ಉಳಿತಾಯ ಇನ್ನೂ ಕಡಿಮೆಯಾಗುವುದು.

ಆದ್ದರಿಂದ, ನೀವು ಎರಡನೆಯ ಫೋನ್ ಪಡೆಯಲಿದ್ದರೆ, ಅದರಿಂದ ನಿಮಗೆ ಸಿಗುವ ಹೆಚ್ಚಿನ ಸೌಲಭ್ಯಕ್ಕಾಗಿ ಮಾತ್ರ ಪಡೆಯಿರಿ, ಬಹಳಷ್ಟು ಹಣ ಉಳಿಸಲು ಅಲ್ಲ. ಹೆಗ್ಗಳಿಕೆಗಂತೂ ಬೇಡ.

**— ಬಿ.ಎಸ್. ಅರುಣ್ ಕುಮಾರ್**

ಸಂಚಾಲಕರು, ಮೈಸೂರು ಗ್ರಾಹಕ ಪರಿಷತ್

---

### ನಗೆಹನಿ - ಬಿಕ್ಷೆ

ಮನೆಯಾತ : ನೀನು ಯಾಕೆ ಭಿಕ್ಷೆ ಬೇಡ್ತಿ

ಭಿಕ್ಷುಕ : ಕುಡಿಯಾಕೆ ಹಣಬೇಕು

ಮನೆಯಾತ : ಯಾಕೆ ಕುಡೀತಿ ?

ಭಿಕ್ಷುಕ : ಭಿಕ್ಷೆ ಬೇಡೋಕೆ ಧೈರ್ಯ ಬರ್ಲಿ ಅಂತಾ.

— ಪಟ್ಟಡ ಹಂಪಿ ಸುಬ್ಬಯ್ಯ, ಮೈಸೂರು.

---

ಕೂಡಿದೆಡೆಯಲಿ ಕಪಟನೆಣಿಸುವವ ದ್ರೋಹಿ — ಕನಕದಾಸ.

# ಕರ್ನಾಟಕ ರಾಜ್ಯದ ನೀರಾವರಿ ಇಲಾಖೆಯ ಮುಖ್ಯ ಇಂಜಿನಿಯರ್ ಆಗಿ ನಿವೃತ್ತಿಯಾಗಿರುವ ಶ್ರೀ ಸಿರಕಜೆ ದೇವಯ್ಯ ಭರತ್



ಭಾಗಮಂಡಲನಾಡು ಚೇರಂಗಾಲಗ್ರಾಮದ ಸಿರಕಜೆ ಮನೆತನದ ದೇವಯ್ಯನವರು ಅವರ ಪತ್ನಿ ಬೇಂಗೂರು ಗ್ರಾಮದ ಕೂಡಕಂಡಿ ಮನೆ ತನದ ಶ್ರೀ ತಮ್ಮಣ್ಣನವರ ಪುತ್ರಿ ಶ್ರೀಮತಿ ಸೀತಮ್ಮ, ಇವರ ದಾಂಪತ್ಯ ಜೀವನದಲ್ಲಿ ಇವರಿಗೆ ನಾಲ್ಕು ಜನ ಮಕ್ಕಳು. ಒಂದು ಹೆಣ್ಣು ಹಾಗೂ ಮೂರು ಗಂಡು ಮಕ್ಕಳು, ಮೊದಲಿನವರು ಭಾಗಿರಥಿ ಇವರು ಪ್ರೊ|| ಪೂಜಾರಿ ಮೊಣ್ಣಪ್ಪನವರ ಧರ್ಮಪತ್ನಿ. ಇವರು ಎಂ.ಎ. ಪದವೀಧರೆ. ಇವರು Central Board for Works Educationಲ್ಲಿ Genaral Directorಆಗಿ ನಿವೃತ್ತರಾಗಿರುತ್ತಾರೆ. ಎರಡನೆಯವರು ಪಾಪಯ್ಯ. ಅವರು ಬಿ.ಎಸ್ಸಿ, ಬಿ. ಎಲ್. ಪದವೀಧರ. ಕರ್ನಾಟಕ ಸರಕಾರದಲ್ಲಿ ತಹಸೀಲ್ದಾರರಾಗಿ ಈವಾಗ ನಿವೃತ್ತರಾಗಿರುವರು. ನಾಲ್ಕನೆ ಯವರು ರಾಮಕೃಷ್ಣ G.C.M. ಪದವೀಧರ. ಇವರು ಸರಕಾರಿ ಡಾಕ್ಟರ್ ಆಗಿ ಹಾಲಿ ಮೈಸೂರಿನಲ್ಲಿ ಕಾರ್ಯ ನಿರ್ವಹಿಸುತ್ತಿರುವರು. ಮೂರನೆಯವರು ಭರತ್‌ರವರು. ಇವರು ಕರ್ನಾಟಕ ರಾಜ್ಯದ ನೀರಾವರಿ ಇಲಾಖೆಯಲ್ಲಿ ಮುಖ್ಯ ಇಂಜಿನಿಯರ್ ಆಗಿ ಕಾರ್ಯ ನಿರ್ವಹಿಸಿರುವ ಹೆಗ್ಗಳಿಕೆ ಇವರದು. ಅವರನ್ನು ಸಂದರ್ಶಿಸಿದಾಗ ಅವರ ಕಿರುಪರಿಚಯ ಈ ರೀತಿ ಇವೆ. ಭರತ್‌ರವರು 1-10-38ರಲ್ಲಿ ಸೀತಮ್ಮ ಮತ್ತು ದೇವಯ್ಯನವರ ಮೂರನೇ ಪುತ್ರರಾಗಿ ಜನಿಸಿದರು. ಇವರ ವಿಧ್ಯಾಭ್ಯಾಸವು ಪ್ರಾಥಮಿಕ ಶಾಲೆಯಿಂದ Intermediate ವರೆಗಿನ ವಿಧ್ಯಾಭ್ಯಾಸ ಮೈಸೂರಿನಲ್ಲಿ 1943-56. lower Studies ಪಬ್ಲಿಕ್ ಪರೀಕ್ಷೆ. 1951ರಲ್ಲಿ S.S.L.C., 1954ರಲ್ಲಿ ಇಂಟರ್‌ಮೀಡಿಯೇಟ್ ಸೈನ್ಸ್. 1956ರಲ್ಲಿ ಮೈಸೂರಿನಲ್ಲಿ ಓದು ಮುಗಿಸಿದರು.

ಬಿ.ಇ. ಡಿಗ್ರಿಗಾಗಿ ದಾವಣೆಗೆರೆಗೆ 1956ರಲ್ಲಿ ಪಯಣ ಬೆಳೆಸಿದರು. ದಾವಣಗೆರೆಯ B.D.T. College of Engineering Govt. Collegeನಲ್ಲಿ ಸಿವಿಲ್ ಇಂಜಿನಿಯರ್ ಆಗಿ ಕೋರ್ಸ್ ಮುಗಿಸಿ1960ರ ಜೂನ್‌ನಲ್ಲಿ ಡಿಗ್ರಿ ಪಡೆದರು. ಆ ವರ್ಷವೇ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ಅಸಿಸ್ಟೆಂಟ್ ಇಂಜಿನಿಯರ್ ಆಗಿ ಸೇರ್ಪಡೆಯಾದರು. ಅವರು ಕಾರ್ಯ ನಿರ್ವಹಿಸಿದ ಮೊದಲ ಸ್ಥಳ ಬಳ್ಳಾರಿ ಜಿಲ್ಲೆಯ ತುಂಗಭದ್ರ ಪ್ರಾಜೆಕ್ಟ್‌ನ ಚಾನಲ್ ಡಿವಿಜನ್‌ನಲ್ಲಿ. ಅವರು ಅಕ್ಟೋಬರ್ 63ರ ವರೆಗೆ ಅಲ್ಲಿ ಕೆಲಸ ಮಾಡಿ Karnataka Engineering Research Station, K.R. Sagarಗೆ ವರ್ಗಾವಣೆಯಾಗಿ October, 63 to June 72ರ ವರೆಗೆ ಮಲ್ಪೆಯ ಮೀನು ಗಾರಿಕೆ ಬಂದರು ಸ್ಥಾಪಿಸುವ ಬಗ್ಗೆ ಅಧ್ಯಯನ ಮಾಡುತ್ತಿರುವಾಗಲೇ ಕಬಿನಿ ಪ್ರಾಜೆಕ್ಟ್‌ಗೆ ವರ್ಗಾವಣೆಯಾಗಿ, August to June 73 ರವರೆಗೆ ಕಬಿನಿ ಬಲದಂಡೆಯ ನಾಲೆಯ ಪ್ರಥಮ ಅತೀ ಆಳದ ಅಗೆತ Canal ಉಳ್ಳ ಕಾಲುವೆಯ (Deepest Canal)ನಿರ್ಮಾಣದ ಕೆಲಸ ನಿರ್ವಹಿಸಿದ್ದರು. ಹಾಗೆಯೇ ಕೆಲವು ಕಾರ್ಯ ನಿರ್ವಹಣೆಯ ಬಗ್ಗೆ ವಿಚಾರಿಸಿದಾಗ ಅವುಗಳ ವಿವರ ಈ ರೀತಿ ಇದೆ. July 73 ರಲ್ಲಿ ಸಹಾಯಕ ಎಕ್ಸಿಕ್ಯೂಟಿವ್ ಇಂಜಿನಿಯರ್ ಆಗಿ ಬಡ್ತಿ ಪಡೆದು, ಅಪ್ಪರ್ ಕೃಷ್ಣ ಪ್ರಾಜೆಕ್ಟ್‌ಗೆ ವರ್ಗವಾಗಿ ಹೋಗಿ ಡಿಸಂಬರ್ 76ರ ವರೆಗೆ ಅಲೆಮಟ್ಟಿ ಪ್ರಾಜೆಕ್ಟ್‌ನಲ್ಲಿ ಕಾರ್ಯ ನಿರ್ವಹಿಸಿದ್ದರು. 1976ರ ಜನವರಿಗೆ ಮಲಪ್ರಭಾ ಪ್ರಾಜೆಕ್ಟ್ ಇರಿಗೇಷನ್ ನರಗುಂದಕ್ಕೆ ವರ್ಗಾವಣೆ, 1980, October ರ ವರೆಗೆ ನರಗುಂದ ಬ್ರಾಂಚ್ ಕಾಲುವೆಯ ಅಚ್ಚುಕಟ್ಟು ಅಭಿವೃದ್ಧಿ ಕಾರ್ಯ ನಿರ್ವಹಣೆ ನಿರ್ವಹಿಸಿದ್ದು, ಈ ಕೆಲಸ ಕಾರ್ಯಗಳಲ್ಲಿ ಕಪು ಪ್ಪಮಣ್ಣಿನ ದಾಗಿದ್ದು, ಕಾಲುವೆ ವ್ಯವಸ್ಥೆಗಳನ್ನು ವಿಶೇಷ ವಿಧಾನಗಳಿಂದ ಗಟ್ಟಿಗೊಳಿಸಿ ಈ ಅಚ್ಚುಕಟ್ಟೆಗಳಿಗೆ ನೀರೊದಗಿ ಸುವ ಕಾರ್ಯ ಒಂದು ವಿಶೇಷ ಬಗೆಯಾಗಿದ್ದು ಇದು ಇಂಜಿನಿಯರ್ ಕೌಶಲ್ಯಕ್ಕೆ ಒಂದು ಸವಾಲ್ ಆಗಿತ್ತು ಎಂದು ಭರತ್‌ರವರು ನೆನಪಿಸುತ್ತಾರೆ ಇಂದು.

1980ರ ನವಂಬರ್‌ನಲ್ಲಿ ಜಮಖಂಡಿ ಬಳಿಯ ಹಿಪ್ಪರಗಿ ಬ್ಯಾರೇಜ್ ಪ್ರಾಜೆಕ್ಟ್‌ಗೆ ವರ್ಗಾವಣೆ ಆಗಿದ್ದು 1981ರಲ್ಲಿ ಡಿಸಂಬರ್‌ನಲ್ಲಿ ಮಡಿಕೇರಿಯಲ್ಲಿನ ಕರ್ನಾಟಕ ಹೌಸಿಂಗ್ ಬೋರ್ಡಿನ ಸಬ್ ಡಿವಿಜನ್‌ಗೆ ವರ್ಗಾವಣೆ ಹಾಗೂ ಕುಶಾಲನಗರ ಮತ್ತು ಸೋಮವಾರ ಪೇಟೆ ನಗರಗಳಲ್ಲಿ ಕೂಡ ಹೌಸಿಂಗ್ ಕಾಲೋನಿಗಳ ಕಾರ್ಯ ನಿರ್ವಹಿಸಿದ್ದು, 1984ರಲ್ಲಿ ಜೂನ್‌ನಲ್ಲಿ ಹಾರಂಗಿ ಪ್ರಾಜೆಕ್ಟ್ ಅಧೀಕ್ಷರ ಅಭಿಯಂತರ ತಾಂತ್ರಿಕ ಸಹಾಯಕರಾಗಿ ವರ್ಗಾವಣೆ, 1989ಮೇನಲ್ಲಿ Executive Engineer ಆಗಿ ಬಡ್ತಿ ಹೊಂದಿ ಜುಲೈನಲ್ಲಿ ಕೆ. ಆರ್. ಸಾಗರದಲ್ಲಿನ ಇಂಜಿನಿಯರ್ಸ್ ಸಿಬ್ಬಂದಿ ಕಾಲೇಜ್‌ನ ಪ್ರಾಧ್ಯಪಕರಾಗಿ ವರ್ಗಾವಣೆ, 1993ರ ಸೆಪ್ಟೆಂಬರ್‌ರ ವರೆಗೆ ಲೋಕೋಪಯೋಗಿ ಹಾಗೂ ನೀರಾವರಿ ಇಲಾಖೆಗಳ ಇಂಜಿನಿಯರ್‌ಗಳಿಗೆ ಪುನಶ್ಚೇತನ (Refresher) ತರಬೇತಿ ಕಾರ್ಯಕ್ರಮ ನಿರ್ವಹಿಸಿದ್ದು, 1993ರ ಅಕ್ಟೋಬರ್‌ನಲ್ಲಿ ಅದೇ ಸಿಬ್ಬಂದಿಯ ಕಾಲೇಜಿನPrincipalಆಗಿ ನೇಮಕ ಹಾಗೂ ತರಬೇತಿ ಕಾರ್ಯಕ್ರಮಗಳ ನಿರ್ವಹಣೆ, 1995 ಡಿಸಂಬರ್‌ನಲ್ಲಿ ಮುಖ್ಯ ಇಂಜಿನಿಯರ್ ಪದವಿಗೆ ಬಡ್ತಿನೀಡಿ ಕರ್ನಾಟಕ ಇಂಜಿನಿಯರಿಂಗ್ ಸಂಶೋಧನಾ ಕೇಂದ್ರದ ನಿರ್ದೇಶಕ ಹುದ್ದೆಗೆ

ನೇಮಕ. ಇದು ಇಲಾಖಾ ಮುಖ್ಯಸ್ಥರ ಹುದ್ದೆ ಆಗಿದ್ದು, ಜನವರಿ 96ರಿಂದ ಸೆಪ್ಟೆಂಬರ್ 96ರ ವರೆಗೆ ಈ ಹುದ್ದೆಯಲ್ಲಿ ಕಾರ್ಯ ನಿರ್ವಹಿಸಿ, ಸೆಪ್ಟೆಂಬರ್ 96ರ ಕೊನೆಗೆ ಅವರು ಸೇವಾ ನಿವೃತ್ತಿ ಪಡೆದರು. ಹೀಗೆ ಹಲವಾರು ಪ್ರಾಜೆಕ್ಟ್‌ಗಳಲ್ಲಿ ಕೆಲಸ ನಿರ್ವಹಿಸಿದ್ದರು. ಸರಕಾರದಿಂದ ಯಾವ ಪುರಸ್ಕಾರಗಳು ಇವರಿಗೆ ಲಭಿಸಲಿಲ್ಲ.

ಇವರನ್ನು ಗೌಡ ಜನಾಂಗದವರಲ್ಲಿ ಇಂಜಿನಿಯರಿಂಗ್ ಪಡೆದ ಹಿರಿಯ ವ್ಯಕ್ತಿಯೆಂದು ಗುರುತಿಸಿ ಫೆಬ್ರವರಿ ತಾ||18-2-2001 ರಂದು ಕುಶಾಲನಗರ ಹೋಬಳಿ ಗೌಡ ಯುವಕ ಸಂಘದ ವತಿಯಿಂದ ಹೃತ್ಪೂರ್ವಕವಾಗಿ ಇವರನ್ನು ಹಾರಹಾಕಿ ಶಾಲು ಹೊದಿಸಿ ಸನ್ಮಾನಿಸಲಾಯ್ತು. ನಿಮಗೆ ನಿಮ್ಮ ಕೆಲಸ ಕಾರ್ಯದಲ್ಲಿ ತೃಪ್ತಿ ಸಿಕ್ಕಿದೆಯಾ? ಎಂದು ಸಂಗಾತಿ ಪ್ರಶ್ನಿಸಿದಾಗ, ಹೀಗೆ ಹೇಳುತ್ತಾರೆ, ಸಂಶೋಧನೆಯಲ್ಲಿ ಮಲ್ಪೆಯಲ್ಲಿ ಬಂದರು ಸ್ಥಾಪಿಸುವ ಬಗ್ಗೆ ಅಧ್ಯಯನ ಮಾಡುತ್ತಿದ್ದಾಗ ವಿಧಾನಸಭೆಯ ಸ್ಪೀಕರ್ ಶ್ರೀ ವೈಕುಂಠಬಾಳಿಗರ ವರು ಇವರ ಕೆಲಸ ನೋಡಿ ಮೆಚ್ಚಿ, ಹೆಚ್ಚಿನ ವ್ಯಾಸಂಗಕ್ಕಾಗಿ ವಿದೇಶಕ್ಕೆ ಕಳುಹಿಸಲು ಸಾಧ್ಯತೆ ಬಗ್ಗೆ ಆಗಿನ ನಿರ್ದೇಶಕರಿಗೆ ತಿಳಿಸಿದರು ಎಂದು ಹೇಳುತ್ತಾರೆ. ಆದರೆ ಕಾರಣಾಂತರದಿಂದ ವಿದೇಶಕ್ಕೆ ಹೋಗಲು ಅವಕಾಶ ಒದಗಲಿಲ್ಲ ಎಂದು ಅಸಮಾಧಾನದಿಂದ ಹೇಳುತ್ತಾರೆ, (U.N.D.P) United National Development Programer ಆಗಿ Free Investment surve on fishary Hourbours ಒಂದು ಉಪ ಸಂಸ್ಥೆಯನ್ನು ತಾವು ಮಲ್ಪೆಯಲ್ಲಿ ಕಟ್ಟಿಸಲು ಉದ್ದೇಶಿಸಿ ಸರ್ವಋತು ಮೀನು ಗಾರಿಕೆ ಬಂದರಿನ ಯೋಜನೆಯ ತಯಾರಿಕೆಯ ಸಂಶೋಧನೆಯ ಅಧ್ಯಯನದಲ್ಲಿ ಕಂಡುಕೊಂಡ ವಿವರಗಳನ್ನು ಪಡೆದುಕೊಂಡು, ಆ ವಿಚಾರ ಚರ್ಚಿಸಲು ಬರುತ್ತಿದ್ದ ವಿವಿಧ ದೇಶಗಳ Exportsಗಳನ್ನು ಅಧ್ಯಯನ ಮಾಡಿದರಿಂದ ನನ್ನನ್ನು ನೇರವಾಗಿ ಸಂಪರ್ಕಿಸುತ್ತಿದ್ದರು. ಇವರಿಗಿಂತ ಮೇಲೆ ಮೂರು ಜನ ಅಧಿಕಾರಿಗಳು ಇದ್ದರು ಕೂಡ ನನ್ನನ್ನು ಸಂಪರ್ಕಿಸುತ್ತಿದ್ದರು ಎಂದು ಭರತ್‌ರವರು ತುಂಬಾ ಸಂತೋಷದಿಂದ ಹೇಳುತ್ತಾರೆ.

ಭರತ್‌ರವರು ನರಗುಂದದಲ್ಲಿದ್ದಾಗ ಕರಿಮಣ್ಣಿನ ಪ್ರದೇಶದಲ್ಲಿ ಬಿಡಿಕಾಲುವೆಗಳು ಇಲ್ಲದೆ ಅಲ್ಲಿನ ರೈತರಿಗೆ ನೀರಿನ ಅಭಾವವಾಗಿತ್ತು, ಆದ್ದರಿಂದ ಅಲ್ಲಿ ಹೊಸ ಕಾಲುವೆ ರಚಿಸಿ ನೀರು ಒದಗಿಸಿದಾಗ ರೈತರು ಇವರನ್ನು ತುಂಬು ಹೃದಯದಿಂದ ಕಂಡು ರೈತರ ಸಂತೋಷವೇ ಇವರಿಗೂ ಕೂಡ ಸಂತೋಷ ತಂದು ಕೊಟ್ಟಿದೆ ಎಂದು ನಡೆದ ಕೆಲವು ಘಟನೆಯನ್ನು ತಿಳಿಸುತ್ತಾರೆ. ಭರತ್‌ರವರ ಕೆಲಸಗಳನ್ನು ಅಧಿಕಾರಿಗಳು ಅನುಕರಣೆಯಿಂದ ಮಾಡುತ್ತಿದ್ದರು. ಇವರು 1995 ಡಿಸಂಬರ್‌ನಲ್ಲಿ ಮುಖ್ಯ ಇಂಜಿನಿಯರ್ ಆಗಿ ಬಡ್ತಿ ದೊರೆತಾಗ ಕೊಡಗಿನ ಸಿವಿಲ್ ಇಂಜಿನಿಯರ್‌ಗಳಲ್ಲಿ ಅಲ್ಲದೆ ಅದು ಅರೆಭಾಷಿಕ ಗೌಡ ಜನಾಂಗದ ಪ್ರಥಮ ಇಂಜಿನಿಯರ್ ಎಂದು ಹೆಮ್ಮೆಯಿಂದ ಹೇಳುತ್ತಾರೆ. ಈ ವಿಷಯ ಭರತ್‌ರವರಿಗೆ ತುಂಬಾ ಸಂತೋಷವನ್ನು ಕೊಟ್ಟಿರುತ್ತದೆ.

ಭರತ್‌ರವರು 1967ರಲ್ಲಿ ಚೇರಳ ಶ್ರೀ ಮಂಗಲ ಗ್ರಾಮದ ಅಯ್ಯಂಡ್ರ ರಾಮಪ್ಪನವರ ಪ್ರಥಮ ಪುತ್ರಿ ಮೀನಾಕ್ಷಿಯೊಡನೆ ಇವರ ವಿವಾಹ. ಇವರು ಬಿ.ಎ. ಪದವೀಧರೆ.

ಭರತ್ ಮೀನಾಕ್ಷಿ ದಂಪತಿಗಳಿಗೆ ಎರಡು ಜನ ಪುತ್ರಿಯರು, ಹಿರಿಯವಳು ಅನುರಾಧ (M.D.P) ಡಿಗ್ರಿ ಪಡೆದು ಬೆಂಗಳೂರಿನ ಖಾಸಗಿ ಸಂಸ್ಥೆಯಲ್ಲಿ Centre for Budget and Policy Studies Research Executive ಆಗಿ ಕೆಲಸ ಮಾಡುತ್ತಿರುವಳು. ಎರಡನೆಯವಳು ಆಶಾ ಅವಳು ಬಿ.ಇ. ಕಂಪ್ಯೂಟರ್ ಸೈನ್ಸ್ ಡಿಗ್ರಿ ಪಡೆದು ಬೆಂಗಳೂರಿನ ಖಾಸಗಿ ಸಂಸ್ಥೆಯಲ್ಲಿ ಸಿಲಿಕಾನ್ ಆಟೋ ಮೆಷಿನ್ ಸಿಸ್ಟಮ್ ಸೀನಿಯರ್ ಸಾಫ್ಟ್‌ವೇರ್ ಇಂಜಿನಿಯರ್ ಆಗಿ ಕೆಲಸ ಮಾಡುತ್ತಿರುವಳು. ಇವರ ಇಬ್ಬರು ಪುತ್ರಿಯರು ಅವಿವಾಹಿತರಾಗಿರುತ್ತಾರೆ. ಕುಶಾಲನಗರದಲ್ಲಿ ನೆಲಸಿರುವ ನೀವು ಸಮಯವನ್ನು ಹೇಗೆ ಕಳಿಯುತ್ತೀರಾ? ಎಂದು ಕೇಳಿದಾಗ ಮನೆಯ ಮುಂದೆ ಹೂ ಕೈತೋಟ ಮಾಡುವುದು, ವಾರ್ತಾ ಪತ್ರಿಕೆ, ವಾರ ಪತ್ರಿಕೆಗಳ್ನು ಓದುವುದು ನನ್ನ ಹವ್ಯಾಸವಾಗಿದೆ. ನೀವು ರಾಜಕೀಯದ ಬಗ್ಗೆ ಏನು ಹೇಳುತ್ತೀರಾ? ಎಂದು ಪ್ರಶ್ನೆಮಾಡಿದಾಗ, ನನಗೆ ಯಾವ ರಾಜಕೀಯ ವ್ಯಕ್ತಿ ಹೆಲ್ಪ್ ಮಾಡಿಲ್ಲ. ಆದ್ದರಿಂದ ಅವರ ಸಂಪರ್ಕದಿಂದ ಆದಷ್ಟು ದೂರವಿದ್ದೇನೆ ಎಂದು ಸಂತೋಷದಿಂದ ಹೇಳುತ್ತಾರೆ. ಹಿಂದಿನ ಕೆಲಸ ಕಾರ್ಯಗಳಿಗೂ ಈಗಿನ ಕಂಪ್ಯೂಟರ್ ಕೆಲಸ ಕಾರ್ಯಗಳಿಗೂ ಇರುವ ವ್ಯತ್ಯಾಸವೇನು ತಿಳಿಸಿ ಎಂದಾಗ ಹೀಗೆ ಹೇಳುತ್ತಾರೆ. ಈ ಹಿಂದೆ ಕೆಲಸ ಕಾರ್ಯಗಳು ಸಿಬ್ಬಂದಿಯವರ ನಿಷ್ಠೆಯ ಮೇಲೆ ನಿಖರವಾಗಿ ನಿಧಾನವಾಗಿ ಕೆಲಸಗಳು ಜರುಗುತ್ತಿದ್ದವು. ಈಗ ಪ್ರಪಂಚ ವೇಗದಿಂದ ಓಡುತ್ತಿದೆ. ಆದರೆ ಸಿಬ್ಬಂದಿಯರಲ್ಲಿ ನಿಷ್ಟೆ ನಿಕರತೆ ಕಡಿಮೆಯಾಗಿದೆ ಅಲ್ಲದೆ ಶ್ರಮ, ಶ್ರದ್ದೆಯೂ ಕಡಿಮೆಯಾಗಿದೆ. ಈ ಪರಿಸ್ಥಿತಿಯಲ್ಲಿ ಕಂಪ್ಯೂಟರ್ ನಿಖರತೆ ಮತ್ತು ವೇಗವನ್ನು ಒದಗಿಸಬಲ್ಲದು. ಜನರು ಕಂಪ್ಯೂಟರ್ ಮೇಲೆ ಹೆಚ್ಚು ಅವಲಂಬಿಸಿರುವುದರಿಂದ ಮನುಷ್ಯನ ಮನಸ್ಸಿನ ಕಾರ್ಯ ದಕ್ಷತೆ ಕುಂದುವ ಸಾಧ್ಯತೆ ಇದೆ ಎಂದು ಭರತ್‌ರವರು ಹೇಳುತ್ತಾರೆ.

ದೊಡ್ಡ, ದೊಡ್ಡ ಕಾಮಗಾರಿಗಳ ಕಾರ್ಯ ನಿರ್ವಹಣೆಯ ಮಾಹಿತಿ ಒದಗಿಸಿ ಕೊಟ್ಟಂತಹ ಭರತ್ ದಂಪತಿಗಳಿಗೂ ಕೊಡಗು ಸಂಗಾತಿಯ ಪರವಾಗಿ ಅನಂತ ಧನ್ಯವಾದಗಳು ಹಾಗೂ ಕುಲದೇವರಾದ ವೆಂಕಟರಮಣ ತಾಯಿ ಶೃಂಗೇರಿ ಈ ಕುಟುಂಬಕ್ಕೆ ಆಯುಷ್ಯ ಆರೋಗ್ಯ ಕೊಟ್ಟು, ಕಾಪಾಡಲಿ ಎಂದು ಶುಭ ಹಾರೈಸೋಣ ಅಲ್ಲವೆ.

— ಲೇಖಿನ : ಆಜಡ್ಕ ರಾಣಿ ಬಾಲಕೃಷ್ಣ, ಕುಶಾಲನಗರ.

# 10ಲಕ್ಷ ರೂ. ವೆಚ್ಚದಲ್ಲಿ ಮಡಿಕೇರಿ ಗದ್ದುಗೆಗಳ ದುರಸ್ಥಿ



ಚಿತ್ರ ದಿನೇಶ್ ಚೈತನ್ಯ

*ಕೊಡಗಿನ ರಾಜ ಶ್ರೀ ಶ್ರೀ ಶ್ರೀ ಲಿಂಗರಾಜೇಂದ್ರ ಒಡೆಯರ್ ನಿರ್ಮಿಸಿದ್ದ, ಇಂಡೊ ಸಾರ್ಸನಿಕ್ ಶೈಲಿಯ ಈ ಸುಂದರ ಗದ್ದುಗೆ ಪ್ರವಾಸಿಗರ ಕಣ್ಮನಗಳನ್ನು ತಣಿಸುತ್ತದೆ. ಇದರಲ್ಲಿ ತನ್ನ ಶವವನ್ನು ಹೂಳಬೇಕೆಂಬ ಅಂತಿಮ ಆಸೆ ರಾಜ ಲಿಂಗರಾಜನಲ್ಲಿ ಇತ್ತೆಂಬ ಮಾತು ಕೇಳಿಬರುತ್ತದೆ. ಇದರ ಅಕ್ಕ ಪಕ್ಕದಲ್ಲಿ ಕೊಡಗನ್ನು ಆಳಿದ ರಾಜರುಗಳ ಗದ್ದುಗೆ(ಸಮಾಧಿ) ಗಳನ್ನು ಕಾಣಬಹುದು*

ಕೊಡಗಿನ ಅರಸರ ಸಮಾಧಿಗಳೆಂದೇ ಗುರುತಿಸಲ್ಪಡುವ ಗದ್ದುಗೆಯು ವೀರರಾಜೇಂದ್ರ ಮತ್ತು ಆತನ ಸಹೋದರ ಲಿಂಗರಾಜೇಂದ್ರ ಒಡೆಯರ ಸಮಾಧಿಗಳಿವೆ.

ಮತ್ತೊಂದು ಗದ್ದುಗೆಯಲ್ಲಿ ರಾಜರ ಗುರುಗಳ ಸಮಾಧಿಯಿದೆ. ಇವುಗಳ ಸನಿಹದಲ್ಲೇ ದೊಡ್ಡ ವೀರರಾಜನ ಕಾಲದಲ್ಲಿ ಟಿಪ್ಪುವಿನ ವಿರುದ್ಧ ಹೋರಾಡಿ ವೀರ ಮರಣ ಹೊಂದಿದ ಬಿದ್ದಂಡ ಬೋಪು ಹಾಗೂ ಮಗ ಬಿದ್ದಂಡ ಸೋಮಯ್ಯ ಇವರುಗಳ ಸಮಾಧಿಯಿದೆ. ಇವರು ಚಿಕ್ಕವೀರರಾಜೇಂದ್ರನ ಆಪ್ತಕಾರ್ಯದರ್ಶಿಯಾಗಿದ್ದರು ಎಂದು ಇತಿಹಾಸ ತಿಳಿಸುತ್ತದೆ. ಗದ್ದುಗೆಯಲ್ಲಿರುವ ನಾಲು ಸಮಾಧಿಗಳಲ್ಲಿ ಮೊದಲೆರಡು ಅರಸರದ್ದು, ಎರಡೂ ಒಂದೇ ವಿನ್ಯಾಸವನ್ನು ಹೊಂದಿವೆ. ರಾಜರ ಸಮಾಧಿಗಳೊಂದಿಗೆ ದಿವಾನ ಚೆಪ್ಪುಡೀರ ಪೊನ್ನಪ್ಪ ಅವರು ನಿರ್ಮಿಸಿದ ರಾಜ ಪುರೋಹಿತ ರುದ್ರಪ್ಪನ ಸಮಾಧಿಯು ಇದೆ.

ನಗರದ ಮುಖ್ಯ ಬೀದಿಯಲ್ಲಿ ಸಾಗಿದರೆ ಬೆಟ್ಟದ ಮೇಲೆ ಎತ್ತರದಲ್ಲಿ ಕಾಣುವ ಅರಸರ ಗದ್ದುಗೆಗಳು ಇಂಡೋ ಸಾರ್ಸೆನಿಕ್ ವಾಸ್ತು ವೈಭವದ ಮತ್ತೊಂದು ನೋಟ. ಗದ್ದುಗೆಗೆ ತೆರಳುವಾಗ ಸಿಗುವ ಮಹದೇವಪೇಟೆಯನ್ನು ದೊಡ್ಡ ವೀರರಾಜೇಂದ್ರ ತನ್ನ ಪತ್ನಿ ಮಹದೇವಮ್ಮಾಜಿಯ ಜ್ಞಾಪಕಾರ್ಥ ಕಟ್ಟಿಸಿದನಂತೆ. ಈ ಗದ್ದುಗೆಗಳು ಗೋಳಾಕಾರದ ಗುಮ್ಮಟಗಳನ್ನು ಹೊಂದಿದ್ದು ಓಂಕಾರೇಶ್ವರ ದೇವಾಲಯದ ಸಾಮ್ಯತೆಯನ್ನೊಳಗೊಂಡಿದೆ.

ಇತಿಹಾಸವನ್ನು ಸಾರಿ ಹೇಳುವ ಗದ್ದುಗೆಗಳ ಸ್ಥಿತಿ ಶೋಚನೀಯವಾಗಿದ್ದನ್ನು ಗಮನಿಸಿದ ವೀರ ಶೈವ ಸಮಾಜದ ಅಧ್ಯಕ್ಷರಾದ ಎಸ್.ಪಿ. ಮಹದೇವಪ್ಪ ಅವರು ತಮ್ಮ ಜನಾಂಗದವರೊಂದಿಗೆ ಗದ್ದುಗೆ ರಕ್ಷಣೆಗೆ ಸತತವಾಗಿ ಹೋರಾಡಿದ್ದ ಹಿನ್ನೆಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಗದ್ದುಗೆಯ ದುರಸ್ತಿಗೆ ರೂ. 10ಲಕ್ಷವನ್ನು ಬಿಡುಗಡೆಗೊಳಿಸಿದ್ದು, ದುರಸ್ತಿ ಕಾಮಗಾರಿಯು ಬರದಿಂದ ಸಾಗುತ್ತಿದೆ.

ಈ ಹಣದಲ್ಲಿ ಗದ್ದುಗೆಯ ದುರಸ್ತಿ ಹಾಗೂ ವಿದ್ಯುತ್ ವ್ಯವಸ್ಥೆಯನ್ನು ಮಾಡಲಾಗುವುದು. ಕಾಮಗಾರಿಗೆ ಹೆಚ್ಚಿನ ಹಣದ ಅವಶ್ಯಕತೆ ಕಂಡು ಬಂದರೆ ನೀಡುವ ಭರವಸೆಯನ್ನು ಇಲಾಖೆಯು ನೀಡದೆ ಎಂದು ಮಹಾದೇವಪ್ಪ ಅವರು ಪತ್ರಿಕೆಯೊಂದಿಗೆ ಮಾತನಾಡುತ್ತ ತಿಳಿಸಿದ್ದಾರೆ. ಈಗಾಗಲೇ ಜಿಲ್ಲಾ ಪಂಚಾಯ್ತಿ ವತಿಯಿಂದ ಗದ್ದುಗೆಯ ಆವರಣದ ಪ್ರವೇಶದ್ವಾರದಲ್ಲಿ ಗೇಟ್ ನಿರ್ಮಾಣಕ್ಕೆ ಒಪ್ಪಿಗೆ ನೀಡಿದ್ದು, ಜಿ. ಪಂ. ಈ ನಿಟ್ಟಿನಲ್ಲಿ ಕಾರ್ಯಪ್ರವರ್ತವಾಗಿದೆ ಎಂದು ಅವರು ಎಂದು ತಿಳಿಸಿದರು.



ದುರಸ್ಥಿಗೊಳ್ಳುತ್ತಿರುವ ಗದ್ದುಗೆಗಳು

ಗದ್ದುಗೆಯ ಸುತ್ತಲಿನ ಜಾಗವನ್ನು ರಕ್ಷಿಸುವ ಉದ್ದೇಶದಿಂದ ಜಿಲ್ಲಾಡಳಿತವು ಸುತ್ತಲೂ ಬೇಲಿ ನಿರ್ಮಿಸಲೂ ತ್ವರಿತವಾಗಿ ಕ್ರಮ ತೆಗೆದುಕೊಳ್ಳುವಂತೆ ಅವರು ಜಿಲ್ಲಾಧಿಕಾರಿಗಳನ್ನು ಒತ್ತಾಯಿಸಿದ್ದಾರೆ. ಈಗಾಗಲೇ ಗದ್ದುಗೆ ವ್ಯಾಪ್ತಿಯ ಜಾಗವನ್ನು ಅತಿಕ್ರಮಿಸಿಕೊಂಡಿದ್ದರ ವಿರುದ್ಧ ನ್ಯಾಯಾಲಯದಲ್ಲಿ ವ್ಯಾಜ್ಯ ನಡೆಯುತ್ತಿದ್ದು, ರಾಜ್ಯ ಕನ್ನಡ ಮತ್ತು ಸಂಸ್ಕೃತಿ ಸಚಿವೆ ರಾಣಿ ಸತೀಶ್ ಅವರು ಮಾನವೀಯ ಹಿತ ದೃಷ್ಟಿಯಿಂದ ಕೇಸು ಹಿಂದಕ್ಕೆ ಪಡೆಯಲೂ ಮನವಿ ಮಾಡಿದ್ದು, ಆ ಹಿನ್ನಲೆಯಲ್ಲಿ ಜಾಗವನ್ನು ಆಕ್ರಮಿಸಿ ಕೊಂಡಿರುವವರು ಮುಂದೆ ಬಂದರೆ ನ್ಯಾಯಾಲಯದಿಂದ ಮೊಕದ್ದಮೆಯನ್ನು ಹಿಂದಕ್ಕೆ ಪಡೆಯಲಾಗುವುದೆಂದರು.

— ಅಜ್ಜಮಾಡ ಕುಟ್ಟಪ್ಪ ರಮೇಶ್, ಮಡಿಕೇರಿ.

# ಸತ್ತಾಗ

— ಆಜಡ್ಕ ರಾಣಿ ಬಾಲಕೃಷ್ಣ. ಕುಶಾಲನಗರ.

ಹೀಗೊಮ್ಮೆ ನಾವು ಯೋಚಿಸಿದಾಗ ನಾನಾ ರೀತಿಯ ಅಲೋಚನೆಗಳು ಮತ್ತು ಸಮಸ್ಯೆಗಳು ನಮ್ಮ ಕಣ್ಣೆದುರಿಗೆ ಬಂದಾಗ ಅವುಗಳು ಹೀಗಾಗಬಹುದು ಅಲ್ಲವೆ? ಒಬ್ಬ ಬಡ ಜೀವಿಯು ತನ್ನ ಹೊಟ್ಟೆಗಾಗಿ ಶಕ್ತಿಮೀರಿ ದುಡಿದರೂ ಬರುವ ಆದಾಯ ಅವನ ಹೊಟ್ಟೆ ಬಟ್ಟೆಗೆ ಸಾಕಾಗುವುದಿಲ್ಲ. ದುಡಿಯುತ್ತಾನೆ, ದುಡಿಯುತ್ತಾನೆ, ಕಾಲ ಹೋದಂತೆಲ್ಲ ದುಡಿದರು ಅವನ ಆಸೆ ಆಕಾಂಕ್ಷೆಗಳಿಗೆ ಕಡಿವಾಣ ಹಾಕುತ್ತಾ ಬರುತ್ತಾನೆ. ಆಹಾರ ಮತ್ತು ಗೃಹ ಬಳಕೆಯ ವಸ್ತುಗಳ ದರ ಏರಿಕೆ ಗಗನ ಮುಟ್ಟುವಂತಿರುತ್ತದೆ. ಮನುಷ್ಯನಾದವನಿಗೆ ಅವನ ಅಂತಸ್ತಿಗೆ ಸರಿಯಾದ ಸರಿದೂಗವಂತಹ ಆಸೆಗಳು ಇರುವುದು ಸರ್ವೆಸಾಮಾನ್ಯ. ಅವುಗಳು ಸಾಧ್ಯವಾಗದಾಗ ಮನಸ್ಸಿನ ಜಿಗುಪ್ಸೆಗಳು ಹೆಚ್ಚಾಗಿ ನಾನಾ ರೀತಿಯ ಸಾವುಗಳನ್ನು ಬಯಸುತ್ತಾನೆ. ರೈತನಾದವನು ದುಡಿದು ದವಸ ದಾನ್ಯ ಮಾರುಕಟ್ಟೆಗೆ ಕೊಟ್ಟರೆ ಅವನ ದುಡಿತಕ್ಕೆ ಸರಿಯಾದ ಬೆಲೆಯು ಸಿಕ್ಕುವಂತಿಲ್ಲ. ಹೀಗಿರುವಾಗ ಅವನು ಸಾವನ್ನು ಬಯಸುವುದು ಸಹಜ. ಮನುಷ್ಯನಿಗೆ ಬೇಕಾಗಿರುವುದು ಮುಖ್ಯವಾಗಿ ಧೈರ್ಯ. ಧೈರ್ಯ ಜೀವನವೆಂಬುದನ್ನು ಒಂದು ಸವಾಲ್ ಆಗಿ ಪರಿಗಣಿಸಿದರೆ ಅದು ಮುಂದಿನ ಜೀವನಕ್ಕೆ ಸ್ಫೂರ್ತಿ ಸಿಕ್ಕಿದಂತಾಗುತ್ತದೆ. ಹೀಗೆ ನಾವು ಪರಿಗಣಿಸಿದಾಗ ಅಂದರೆ ಒಬ್ಬ ಬಡಜೀವಿ ಅನಾರೋಗ್ಯದಿಂದಲೇ ಅಥವಾ ನಿಶಕ್ತಿಯಿಂದಲೋ ಒಂದು ಕುಟುಂಬದ ಜವಾಬ್ದಾರಿಯನ್ನು ಹೊತ್ತು ಸಂಸಾರವೆಂಬ ನೌಕೆಯನ್ನು ಸಾಗುತ್ತಿರಬೇಕಾದರೆ, ನೌಕೆಯ ಹುಟ್ಟು ಹಾಕುವವನು ಕುಟುಂಬದ ಯಜಮಾನನಾಗಿರುತ್ತಾನೆ. ಇಂತಹ ಪರಿಯಲ್ಲಿ ಏನಾದರು ತೊಂದರೆಯಾದಲ್ಲಿ ಸ್ನೇಹಿತರಿಂದಲೋ, ಕುಟುಂಬದವರಿಂದಲೋ ಅಥವಾ ಪರಜನರ ಸಹಾಯವನ್ನು ಬೇಡಿದಲ್ಲಿ ಅಂತಹವರಿಂದ "ಚೀಮಾರಿ ಹಾಕಿಸಿಕೊಂಡು ಕೆಲವು ಬೈಗಳುಗಳನ್ನು ಬೈಸಿಕೊಂಡು ಹಣವನ್ನು ಸಾಲದ ರೂಪದಲ್ಲಿ ಪಡೆದುಕೊಳ್ಳುತ್ತಾನೆ. ಅದಕ್ಕೆ ಕೂಡ ಬಡ್ಡಿ ಕಟ್ಟಿ ಕಟ್ಟಿ ಅಸಲು ಹಣ ತೀರದಾಗ ಮನಸ್ಸಿನ ಹತೋಟಿಯನ್ನು ಕಳೆದುಕೊಳ್ಳುವ ಸಂಭವ ಹೆಚ್ಚಾಗಿ ಕುಡಿತಕ್ಕೆ ಮಾರು ಹೋಗುವುದು ಸಹಜ. ಈ ಸಮಾಜ ಹೀಗಿರುವಾಗ ನಾವು ಬಯಸುವುದಾದರೂ ಏನನ್ನು? ಕುಡಿತವು ಜನರ ಮನಸ್ಸನ್ನು ಅಲ್ಲೋಲ್ಲ ಕಲ್ಲೋಲ ಮಾಡಿ ಉಳಿದ ಕುಟುಂಬದ ಜನರ ಮನಸ್ಸಿನ ನೆಮ್ಮದಿಯನ್ನು ಹಾಳುಮಾಡುತ್ತಾನೆ. ಇದರಲ್ಲಿ ಕಲಹಗಳು ಹೆಚ್ಚಾಗಿ ಜನರು ವಿಧಿವಶವಾಗುವರು. ನಾವು ಈಗಾಗಲೇ ದಿನ ನಿತ್ಯ ಪತ್ರಿಕೆಯಲ್ಲಿ ಓದುತ್ತೇವೆ. ಹೀಗಿರುವಾಗ ಅಂತಹ ವ್ಯಕ್ತಿ ಒಬ್ಬ ಗಣ್ಯನಾಗಿದ್ದು ಅನಾರೋಗ್ಯದಿಂದಲೋ ಇದ್ದರೆ ಜನರ ಪೇಚಾಟಕ್ಕೆ ಸಿಲುಕಿ ಅವರ ಕ್ಷೇಮವನ್ನು ಬಯಸುತ್ತಾನೆ. ಒಬ್ಬ ಪತ್ರಕರ್ತ ಹೀಗೆ ಹೇಳುತ್ತಾನೆ. ಜನರು ಕುಡಿತಕ್ಕೆ ಸೂಳೆಗಾರಿಕೆಗೆ, ಮದುವೆ ಇತ್ಯಾದಿಗಳಿಗೆ ದುಂದು ವೆಚ್ಚ ಮಾಡುತ್ತಾರಲ್ಲ. ನಾವು ಒಳ್ಳೆ ಆದರ್ಶಗಳಿಗೆ ಒಂದಿಷ್ಟು ಹಣ ಕೇಳಿದರೆ ಇಲ್ಲವೆಂದು ಹೇಳುತ್ತಾರೆ. ಅವರು ಸತ್ತಾಗ ಹೆಣದ ಜೊತೆಯಲ್ಲಿ ಹಣವನ್ನು ತೆಗೆದು ಕೊಂಡು ಹೋಗುತ್ತಾರೆಯೇ? ಅದು ಅಲ್ಲದೆ ಅವರು ಸತ್ತಾಗ ಶ್ರದ್ದೆಯಲ್ಲಿ (ಭಕ್ತಿಯಿಂದಲಿ) ಸ್ವರ್ಗ ಸಲ್ಲಿಸುತ್ತಾರೆ. ಅವರ ಉತ್ತರ ಕ್ರಿಯೆ ಗಳನ್ನು ನಾನಾ ರೀತಿಯ ಬಗೆ ಬಗೆಯ ತಿಂಡಿ ತಿನಿಸುಗಳು ಹಾಗೂ ನಾನಾ ಪದಾರ್ಥಗಳನ್ನು ಮಾಡಿ ಸತ್ತವರಿಗೆ ಮಾಡಿ ಬಡಿಸು ತ್ತಾರಲ್ಲ ? ಯಾಕೆ? ಅದು ಯಾಕೋ ನನಗೆ ಸರಿ ಕಾಣುದಿಲ್ಲಪ್ಪ. ಯಾಕೆಂದರೆ ಅವರು ಜೀವದಲ್ಲಿರುವಾಗ ಔತಣವನ್ನು ಕುರ್ಚಿಯಲ್ಲಿ ಕುಳಿತು ಮೇಜಿನ ಮೇಲೆ ಊಟ ಮಾಡುತ್ತಾರೆ. ಅದು ಅಲ್ಲದೆ ನಾನಾ ರೀತಿಯ ಕಾಹಿಲೆಗಳು ಇದ್ದರಂತೂ ಹೇಳದು. ಸುಗರ್ ಅಂತೆ, ಬಿ.ಪಿ. ಅಂತೆ, ಜಾಂಡಿಸ್ ಅಂತೆ, ಹೃದಯ ರೋಗವಂತೆ, ಹೀಗೆ ಇಂತಹ ಕಾಹಿಲೆಗಳಿಗೆ ಸರಿಯಾಗಿ ಪತ್ಯದ ಊಟ ಅಂದರೆ ಎಣ್ಣೆ ಹಾಕದ ಪದಾರ್ಥಗಳು. ಉಪ್ಪು ಹಾಕದ ಸಾಂಬರ್. ಸಿಹಿ ಹಾಕದ ತಿಂಡಿ, ಕಾಫಿ ಹೀಗೆ ಅನೇಕ ಇಂತಹ ಊಟವನ್ನು ಟೇಬಲ್ಲಿನಲ್ಲಿ ಕುಳಿತು ತಿನ್ನುವವನು ಸತ್ತಾಗ ಉತ್ತರ ಕ್ರಿಯೆಯಲ್ಲಿ ಎಲ್ಲರು ಚಳ್ಳೆಯಲ್ಲಿ ಸ್ಮಶಾನದಲ್ಲಿ ಇಡುತ್ತಾರಲ್ಲ. ಜೀವದಲ್ಲಿರುವಾಗ ತಿನ್ನದವರು ಇನ್ನು ಸತ್ತಾಗ ತಿನ್ನುತ್ತಾರೆಯೆ? ಅದು ಅಲ್ಲದೆ ಅವರ ಹೆಸರಿನಲ್ಲಿ ಮಾಡಿದ ಅಡಿಗೆಯು ಉಳಿದ ಜನರಿಗೆ ಗಮ್ಮತ್ತೇ ಗಮ್ಮತ್ತು. ಇದರಲ್ಲಿ ನನಗೆ ತೃಪ್ತಿ ಇಲ್ಲ. ನಿಮಗೆ ಸಿಕ್ಕುತ್ತದೆಯೆ? ಎಂದು ಹೇಳುತ್ತಾರೆ. ಈ ಖರ್ಚಿನ ಬಾಪ್ತಿನ ಬೆಲೆ ತೆಗೆದು ಕೊಂಡರೆ, ಈಗಿನ ಜನರ ಪರಿಸ್ಥಿತಿಯಲ್ಲಿ ಒಂದು ಕಡೆ, ಭೂಕಂಪ, ಪ್ರವಾಹ, ನೆರೆ ಪೀಡಿತ, ಹೀಗೆ ಹಲವಾರು ಸಮಸ್ಯೆಗಳು ಇರುವ ಜನರಿಗೆ ಸ್ವಲ್ಪ ಸಹಾಯ ಮಾಡಿದರೆ ಸತ್ತವರಿಗೆ ಸ್ವಲ್ಪವಾದರು ತೃಪ್ತಿ ಸಿಕ್ಕಬಹುದು ಅಲ್ಲವೆ? ಎಂದು ಹೇಳುವರು. ನನಗೂ ಹಾಗೆ ಅನ್ನಿಸಿತ್ತು ಯಾಕೆಂದರೆ ಮನುಷ್ಯನು ಸತ್ತಾಗ ಅವನ ಆತ್ಮಯೆಂಬುವುದು ಇದೆಯಲ್ಲಾ, ಅದು ಸ್ವರ್ಗಕ್ಕೆ ಹೋಗುತ್ತೋ ಅಥವಾ ನರಕಕ್ಕೆ ಹೋಗುತ್ತೋ ತಿಳಿಯದು. ಅದನ್ನು ಕಂಡವರಿಲ್ಲ, ಹಾಗೂ ಅರಿತವರಿಲ್ಲ. ಹೀಗಿರುವಾಗ ಈ ಕಾಯಕ್ರಮಗಳನ್ನು ಜನರು ಮಾಡುವುದು ಸರ್ವೆಸಾಮಾನ್ಯ ಹಾಗೂ ಮಾಡಿದವರಿಗೆ ಆತ್ಮ ತೃಪ್ತಿ ಸಿಕ್ಕುವುದಕ್ಕೆ ಎಂದು ನನ್ನ ಅನಿಸಿಕೆ. ಅದಕ್ಕೆ ಹಿಂದಿನ ಕಾಲದಲ್ಲಿ ಒಂದು ಕತೆಯೇ ಇದೆಯಂತೆ. ತಿಳಿದವರು ಹೇಳುತ್ತಾರೆ. ಅದು ಎಷ್ಟು ಸತ್ಯವೊ, ಎಷ್ಟು ಸುಳ್ಳೊ? ಅದು ದೇವರಿಗೆ ಗೊತ್ತು. ಹಾಗೆ ಯೋಚಿಸಿದರೆ ಯುದ್ಧದಲ್ಲಿ ಮಡಿದವರು, ಭೂಕಂಪದಲ್ಲಿ ಮಡಿದವರು ಕಗ್ಗೊಲೆಯಾದವರು, ಹೀಗೆ ಅನೇಕ ಅನೇಕ ಸಮಸ್ಯೆಗಳು ಇದೊಂದು ವಿಪರ್ಯಾಸ ಎಂದು ಹೇಳುತ್ತಾರೆ. ನಾನು ಸತ್ತಾಗ ಹೀಗಾಗ ಬಾರದಪ್ಪ, ಯಾಕೆಂದರೆ ಸತ್ತಾಗ ಎಷ್ಟು ಜನರು ಬರುತ್ತಾರೆ? ಎಷ್ಟು ಜನರು ಅಳುತ್ತಾರೋ ಸತ್ತವರಿಗೆ ಒಂದು ದೃಷ್ಟಿ ಅಂತ ಇದ್ದಿದ್ದರೆ

ಕೆಡುವ ಕಾಲಕ್ಕೆ ಬುದ್ಧಿ ಇಲ್ಲ, ಮರಣ ಕಾಲಕ್ಕೆ ಮದ್ದಿಲ್ಲ.

20 ನೇ ಪುಟಕ್ಕೆ

# ಸೆಳೆತ

— ಬಿ. ಆರ್. ಜೋಯಪ್ಪ

ಅರಣ್ಯ ಜಮೀನನ್ನು ಸ್ವಂತಕ್ಕಾಗಿ ಉಪಯೋಗಿಸಿಕೊಳ್ಳುವ ಕಾಲವೊಂದಿತ್ತು. ಅದಕ್ಕೆ ಸರಕಾರ ಕಂದಾಯವನ್ನು ತೆಗೆದುಕೊಳ್ಳುತ್ತಿತ್ತು. ಅಂಥ ಜಮೀನಿನಲ್ಲಿ ನೂರಾರು ಕುಟುಂಬಗಳಿದ್ದವು. ಹತ್ತಾರು ಎಕರೆ ನಮ್ಮ ಪಾಲಿಗೂ ಇತ್ತು. ಅರಣ್ಯದ ನಡುವೆಯೇ ಇದ್ದುದು ನಮ್ಮ ಆಸ್ತಿ. ಅದು ಬಿಟ್ಟರೆ ಬೇರೆ ಗತಿಯಿಲ್ಲ. ಊರ ತಲೆಕಟ್ಟಿನಲ್ಲಿದ್ದುದು ನಮ್ಮ ಮನೆ ಮತ್ತು ಗದ್ದೆಯಾದುದರಿಂದ ಕಾಡು ಪ್ರಾಣಿಗಳಿಗೆ ಮೊದಲು ಬಲಿಯಾಗುತ್ತಿದ್ದುದು ನಾವೇ.

ನಮ್ಮದು ನಾಲ್ಕು ಜನರ ಕುಟುಂಬ. ಅಪ್ಪ ಕಾಯಿಲೆ ಬಿದ್ದು ಹಲವು ವರ್ಷಗಳಾಗಿದ್ದವು. ಅವ್ವನೇ ಆಗ ಅಪ್ಪನ ಜವಾಬ್ದಾರಿ ಹೊತ್ತವಳು. ಅವ್ವನಿಗೆ ನೆರವಾಗುತ್ತಿದ್ದವರು ನಾನು ಮತ್ತು ಅಕ್ಕ. ನಾವಿಬ್ಬರೂ ಚಿಕ್ಕವರು. ಅವ್ವನಿಂದ ಹೊಲ ಗದ್ದೆ ಉಳಲು ಆಗದೆ ಅವರಿವರನ್ನು ದಮ್ಮಯ್ಯ ಗುಡ್ಡೆ ಹಾಕಿ ಉಳುಮೆ ಮಾಡಿಸಿಕೊಳ್ಳುತ್ತಿದ್ದೆವು. ಗದ್ದೆಗೆ ಬಿತ್ತನೆ ಮಾಡಿದಲ್ಲಿಂದ್ಲ ಫಸಲು ಮನೆ ಸೇರುವವರೆಗೆ ಕಣ್ಣಿಗೆ ಎಣ್ಣೆ ಬಿಟ್ಟು ಕಾಯಬೇಕಾಗಿತ್ತು. ಹಗಲಿಡೀ ಗಿಳಿ, ಚೋರೆ, ಗೀಜುಗ ಹಕ್ಕಿಗಳಲ್ಲದೆ ಕಪಿಗಳು ಮತ್ತು ದನಗಳು ಲೂಟಿ ಮಾಡುತ್ತಿದ್ದವು. ರಾತ್ರಿಯಾದೊಡನೆ ಆನೆ ಮತ್ತು ಕಾಡುಹಂದಿಗಳು ರಂಪ ಮಾಡುತ್ತಿದ್ದವು.

ನಮ್ಮಲ್ಲಿ ಕೋವಿ ಇರಲಿಲ್ಲ. ಇದ್ದರೂ ಉಪಯೋಗಕ್ಕೆ ಬರುತ್ತಿರಲಿಲ್ಲ. ಏಕೆಂದರೆ ಅವ್ವ ಗುಂಡುಹೊಡೆಯಲು ಕಲಿತಿರಲಿಲ್ಲ. ಅಪ್ಪ ಸದಾ ಹಾಸಿಗೆಯ ಜನ. ನಾವು ಪುಟಾಣಿಗಳು.

ಶಾಲೆಯಿಂದ ಬಂದೊಡನೆ ಗದ್ದೆಯಲ್ಲಿರುವ ಅಟ್ಟಪಾಳಿಗೆ (ಗುಡ್ಲು) ಕುಂಟೆ ಹೊರಬೇಕಾಗಿತ್ತು. ರಾತ್ರಿ ಗದ್ದೆಯಲ್ಲಿ ಚಳಿ ಕಾಯಿಸಬೇಕು. ಬೆಂಕಿ ರಾಶಿಯಿದ್ದರೆ ಕಾಡು ಪ್ರಾಣಿಗಳು ಹತ್ತಿರ ಬರುವುದಿಲ್ಲ. ಹಾಗಾಗಿ ಸಂಜೆಯಾಗುತ್ತಲೇ ಕುಂಟೆಗಳನ್ನು ಜೋಡಿಸಿ ಬೆಂಕಿ ಮಾಡಿ ಮನೆಗೆ ಬಂದು ರಾತ್ರಿಯ ಊಟ ಮಾಡಿ ನಾಯಿಯನ್ನು ಮನೆಯಲ್ಲೇ ಕಟ್ಟಿ ಅಪ್ಪನಿಗೆ ಹೇಳಿ, ಲಾಟೀನು ಹಿಡಕೊಂಡು ಅವ್ವನ ಹಿಂದೆ ಗದ್ದೆಯತ್ತ ಕುಣುಕುಣು ನಡೆಯುತ್ತಿದ್ದೆವು. ಪುಸ್ತಕದ ಚೀಲ ಹೆಗಲಲ್ಲಿ ನೇತಾಡುತ್ತಿತ್ತು. ಲಾಟೀನು ಬೆಳಕಲ್ಲಿ ನಮ್ಮ ನೆರಳು ನಮ್ಮನ್ನೇ ಹೆದರಿಸುವಂತೆ ಕಾಣುತ್ತಿತ್ತು. ನೆರಳನ್ನು ನೋಡಬಾರದು ಅಂತ ಅವ್ವ ಹೇಳುತ್ತಿದ್ದರೂ ನಾವು ಕದ್ದು ನೆರಳನ್ನು ನೋಡಿ ಹೆದರಿಕೊಳ್ಳುತ್ತಿದ್ದೆವು. ಗದ್ದೆಯನ್ನು ತಲುಪಿ ಕಂಬದಲ್ಲಿ ಲಾಟೀನು ನೇತುಹಾಕಿ ಬೆಂಕಿಯನ್ನು ಕೆದಕಿ ಉರಿ ಹೆಚ್ಚು ಮಾಡಿ ಬೆಂಕಿಯ ಸುತ್ತ ಕುಳಿತು ಚಳಿ ಕಾಯಿಸುತ್ತಿದ್ದೆವು. ನಾಕಾರು ಬಾರಿ ಚೂ ಕೂಡಿ, ಟಿನ್ನನ್ನು ದಬದಬನೆ ಬಡಿದು ಮತ್ತೆ ಓದಲು, ಬರೆಯಲು ಕೂರುತ್ತಿದ್ದೆವು. ಬಿದಿರ ಚದಲೆಯ ಹಾಸಿನ ಮೇಲೆ ಹುಲ್ಲು ಹಾಸಿಗೆ. ಕಾಲಿನ ಕಡೆ ಹೊದೆಯಲು ಗೋಣಿ ಚೀಲ. ಮೈಮೇಲೆ ಬೆಡ್‌ಶೀಟ್‌ನ ಹೊದಿಕೆ. ತಲೆಗೆ ಅವ್ವನ ಸೀರೆ ತುಂಡಿನ ಮುಂಡಾಸು. ಬೀಸುವ ಗಾಳಿಗೆ ತಡೆಯಿಲ್ಲ. ಅಟ್ಟಪಾಳಿಗೆಲ್ಲಿಯ ಗೋಡೆ!

ಅವ್ವ ಮೊದಲು ಮಲಗುತ್ತಿದ್ದಳು. ಆದರೆ ನಿದ್ದೆ ಮಾಡುತ್ತಿರಲಿಲ್ಲ. ಅಕ್ಕ ಮತ್ತು ನಾನು ಓದುತ್ತಾ ಕುಳಿತಿರುತ್ತಿದ್ದೆವು. ನಡು ನಡುವೆ 'ಚೂ ಅದ್ದಾ ಚೂ' ಅನ್ನುತ್ತಾ ಟಿನ್ನು ಬಡಿಯುತ್ತಿದ್ದೆವು. ಅವ್ವ ಮಲಗಿದಲ್ಲಿಂದ 'ಚೂ' ಅನ್ನುತ್ತಿದ್ದಳು. ನಾನು ಅಕ್ಕನಿಗಿಂತ ಸ್ವಲ್ಪ ಬೇಗ ಮಲಗುವ ಪೈಕಿ! ಅಕ್ಕ ಮತ್ತು ಅವ್ವನ ನಡುವೆ ನಾನು ಮಲಗಿಬಿಡುತ್ತಿದ್ದೆ. ಅವ್ವನನ್ನು ತಬ್ಬಿ ಮಲಗದಿದ್ದರೆ ನನಗೆ ನಿದ್ರೆ ಬಾರದು. ಅಷ್ಟೇ ಅಲ್ಲ, ಅವ್ವನ ಬೆವರ ವಾಸನೆ ನನಗೆ ತುಂಬಾ ಇಷ್ಟ. ಹಾಳು ಚಳಿ ಬೇರೆ. ಅದೂ ಅಲ್ಲದೆ ನಾನು ಕಿರಿಯವನೂ ಹೌದು. ಅದಕ್ಕೇ ನಡುವಿನ ಜಾಗ ನನಗೇ ಮೀಸಲು! ಆದರೆ ಯಾವತ್ತೂ ನನಗೆ ನಡುವಿನ ಜಾಗ ಸಿಗುತ್ತಿರಲಿಲ್ಲ. ಕಾರಣ ಅಕ್ಕ ರಂಪ ಮಾಡುತ್ತಿದ್ದಳು. ಆದ್ದರಿಂದ ನಮ್ಮಿಬ್ಬರ ನಡುವೆ ಒಂದು ಒಪ್ಪಂದ ಏರ್ಪಟ್ಟಿತ್ತು. ನಾಲ್ಕುದಿನ ನಾನು ನಡುವೆ ಮಲಗಿದರೆ ಇನ್ನು ನಾಲ್ಕು ದಿನ ಅವಳು ನಡುವೆ ಮಲಗುವುದೆಂದು. ಬೇರೆ ಲೆಕ್ಕ ತಪ್ಪುತ್ತಿದ್ದರೂ ಈ ನಾಲ್ಕು ದಿನದ ಒಪ್ಪಂದ ಮಾತ್ರ ತಪ್ಪುತ್ತಿರಲಿಲ್ಲ!

ನಾವು ಮಲಗಿಕೊಂಡಾಗ ತೂತವಾದ ಸೂರಿನೆಡೆಯಲ್ಲಿ ನಕ್ಷತ್ರ ನೋಡುತ್ತಿದ್ದೆವು. ತಿಂಗಳ ಬೆಳಕಿನ ರಾತ್ರಿಯಂತೂ ನಮ್ಮ ಪಾಲಿನ ಸ್ವರ್ಗ, ಅಂಥ ರಾತ್ರಿ ಕಾಡು ಪ್ರಾಣಿಗಳ ಕೂಗು ಕೇಳುವುದೊಂದು ಚಂದ. 'ಟಾಂಕ್ ಟಾಂಕ್' ಎಂದು ಚಂಗ ಹಾಕುವ ಕಡವೆಗಳು. 'ಕೂ ಕೂ' ಎಂದು ಕೂಗುವ ಜಿಂಕೆಗಳು. 'ಬೆರ್ರೇ ಬೆರ್ರೇ' ಎಂದು ಬೆದರಿ ಕೂಗುವ ಕಾಡುಕುರಿಗಳ ಕೂಗು ಮನಸ್ಸಿಗೆ ಹಿತವೆನ್ನಿಸುತ್ತಿದ್ದರೂ ಅವುಗಳು ಹುಲಿ ಅಥವಾ ಚಿರತೆಗಳ ವಾಸನೆ ತಿಳಿದು ಕೂಗುತ್ತವೆಂದು ತಿಳಿದಾಗ ಕರುಳಿಗೆ ಚಳಿ ಕೂರುತ್ತಿತ್ತು. ಆನೆಗಳ ಘೀಳಿಡುವಿಕೆ ಮಾತ್ರ ನಾವು ರಾತ್ರಿ ಓದಿದ್ದ ಪಾಠವನ್ನು ಅಳಿಸಿಬಿಡುತ್ತಿತ್ತು.

ಗದ್ದೆ ಒತ್ತಿನ ಕಾಡಿನ ಬಿದಿರ ಮೆಳೆಯನ್ನು ಮುರಿಯುತ್ತಾ ಬೆಂಡೆ ಮರದ ನಾರನ್ನು ಸೀಳಿ ಸೀಳಿ ತಿನ್ನುತ್ತ ಘೀಳಿಟ್ಟುಕೊಂಡು ಗದ್ದೆಯತ್ತ ಬರುವ ಆನೆಗಳನ್ನು ಅಟ್ಟುವುದಾದರೂ ಹೇಗೆ? ಅವ್ವ ಕೂಡಲೆ ಬೇಡವ್ವಾ ಹೋಗಬೇಡವ್ವೋ" ಎಂದು ಅಂಗಲಾಚಿಕೊಂಡರೂ ಆಕೆ ಕೇಳುತ್ತಿರಲಿಲ್ಲ. ' ಅದ್ದಾ ಅದ್ದಾ ಏಯ್ ಏಯ್' ಎಂದು ಅದ್ದರಿಸುತ್ತಾ ಆನೆಯ ಸಮೀಪವೇ ಹೋಗುತ್ತಿದ್ದಳು. ಆನೆಗಳು ಬೆಂಕಿಯ ಬೆಳಕಿಗೆ ಅಂಜಿಯೋ ಏನೋ ಹಿಂದಕ್ಕೆ ಸರಿಯುತ್ತಿದ್ದವು. ಬೆಳಿಗ್ಗೆ ಎದ್ದು ಆನೆ ಇಳಿದ ಗದ್ದೆಗಳನ್ನು ನೋಡಿದರೆ ಕಂಡದ್ದು ಬರೇ ಹೆಜ್ಜೆಗುರುತು! ನಾಟಿಯನ್ನು ಕಿತ್ತು ಸೂರೆ ಮಾಡಿ ತುಳಿದು ತುಳಿದು ಹಾಳು ಮಾಡಿದ್ದನ್ನು ನೋಡಿದ ಅವ್ವ" ಈ ಗದ್ದೆಗೆ ಕತ್ತಿ ಹಾಕುವುದೇ ಬೇಡ ಮಕ್ಕಳೆ" ಎಂದಾಗ ಅವಳ ಮುಖ ಇಷ್ಟೇ ಅಗಲವಾಗಿತ್ತು. ನಾವು ಅತ್ತೆವು.

ಬತ್ತದ ನಾಟಿ ಒಡೆ ಬಂದು ಕದಿರು ದಾಟಿ ಇನ್ನೇನು ಹಾಲು ತುಂಬಬೇಕನ್ನುವಾಗ ಗಿಳಿಗಳು ಕದಿರನ್ನು ಕತ್ತರಿಸಿಕೊಂಡು

ಹಾರುತ್ತಿದ್ದವು. ತುದಿ ಬತ್ತ ಕೆಂಪಾಗುತ್ತಿದ್ದಂತೆ ಗೀಜುಗ, ಕಪಿಗಳು ಹಾಳು ಮಾಡುತ್ತಿದ್ದವು. ನವೆಂಬರ್ ತಿಂಗಳಲ್ಲಿ ಗಾಳಿ ಬೀಸಿದರಂತೂ ಬೆಳೆ ಚಾಪೆ ಹಾಸಿದಂತೆ ಮಲಗಿ ಬಿಡುತ್ತಿತ್ತು. ಬಿದ್ದ ಬೆಳೆಯಲ್ಲಿ ಮಜಾ ಉಡಾಯಿಸುತ್ತಿದ್ದುದು ಚೋರೆ ಹಕ್ಕಿಗಳು ಮತ್ತು ಇಲಿಗಳು.

ಹಗಲು ಹೇಗೋ ಕಾಲ ನೂಕಿ ಹೋಗುತ್ತಿತ್ತು. ರಾತ್ರಿಯದೇ ನರಕ. ಊರವರ ಗದ್ದೆಗಳಿಗೂ ಉಪದ್ರ ಉಂಟು. ಆದರೆ ಅವರಲ್ಲಿ ಕೋವಿ ಇರುತ್ತಿತ್ತು. ಗದ್ದೆಯಲ್ಲಿ ಗಂಡಸರೇ ಮಲಗುತ್ತಿದ್ದುದು. ಆನೆ, ಹಂದಿಗಳಿಗೆ ಬಿಸಿ ಮುಟ್ಟಿಸುತ್ತಿದ್ದರು.

ಅಂದು ಬೆಳಗಿನ ಜಾವದ ಹೊತ್ತು. ಅಸಾಧ್ಯ ಚಳಿ ಬೇರೆ. ಅವ್ವ ಎದ್ದು ಕೆಂಡ ಕೆದಕಿ ಉರಿ ಮಾಡಿ ಟಿನ್ನು ಬಡಿದಳು. ಆ ಟಿನ್ನೋ ಹೊಡೆತ ತಿಂದೂ ತಿಂದೂ ದದ್ದಾಗಿತ್ತು. ಆ ಸದ್ದಿಗೆ ಪ್ರತಿಯಾಗಿ "ಗುರ್ ಚಪ್ ಚಪ್" ಅಂತ ಬಾಯಿ ಚಪ್ಪುವ ಸದ್ದು. ಅವ್ವ ಲಾಟೀನು ಹೊತ್ತಿಸಿದಳು. 'ಅಕ್ಕಯ್ಯ, ಅಣ್ಣಯ್ಯ ಏಳಿ ಏಳಿ' ಎಂದಳು. ನಾವು ಕಣ್ಣು ಉಜ್ಜಿಕೊಂಡು 'ಯಂತವ್ವಾ' ಎಂದೆವು. ಆ ಬಾಯಿ ಚಪ್ಪರಿಸುವ ಸದ್ದು ನನಗೆ ಚೆನ್ನಾಗಿ ಕೇಳುತ್ತಿತ್ತು. ಅತ್ತ ಕಡೆಗೆ ಅವ್ವ ಲಾಟೀನು ತಕ್ಕೊಂಡು ಹೊರಟಳು. ನಾವೂ ಜೊತೆಯಾದೆವು. ಗದ್ದೆ ಏರಿಯ ಹುಲ್ಲು ನೀರಾಗಿತ್ತು. ಚಪ್ಪರಿಸುವ ಸದ್ದು ನಮ್ಮ ಕಡೆಗೇ ಬರುತ್ತಿರಲು ಅವ್ವ 'ಚೂ ಚೂ ಹಿಡಿ ಹಿಡಿ' ಎಂದು ಬೊಬ್ಬೆ ಹಾಕಿದಳು. ನಾವು ಧ್ವನಿಗೂಡಿಸಿದೆವು. 'ಗುರ್ ಚಪ್‌ಚಪ್' ಸದ್ದಿನ ಹಿಂದೆ ಸಣ್ಣದಾಗಿ 'ಕುರ್‌ಗರ್ ಕುರ್‌ಗುರ್' ಅನ್ನುವ ಸದ್ದು! ಓಹೋ ಕಾಡುಹಂದಿಗಳು. ನಮ್ಮ ಬೊಬ್ಬೆಗೆ ದಡ್ಡ ಹಂದಿ ನಮ್ಮ ಕಡೆಗೇ ಬರುತ್ತಿತ್ತು. ಎಷ್ಟು ಹತ್ತಿರವೆಂದರೆ ನಮ್ಮ ಲಾಟೀನು ಬೆಳಕಿಗೆ ಕಾಣುವಷ್ಟು ಹತ್ತಿರ! ಅವ್ವ ಬಗ್ಗಿ ಏನನ್ನೋ ಎತ್ತಿ ಅತ್ತ ಎಸೆದಳು. 'ಗೊಗ್' ಎಂದು ಹಂದಿ ಅತ್ತ ತಿರುಗಿ ಉಳಿದ ಹಂದಿಗಳೊಡನೆ ಕಾಡಿನತ್ತ ನುಗ್ಗಿತು. ಗದ್ದೆಯಲ್ಲಿ ನಾವು ಬೊಬ್ಬೆ ಹಾಕದ್ದನ್ನು ಕೇಳಿ ಮನೆಯ ಬಳಿ ಕಟ್ಟಿದ್ದ ನಮ್ಮ ನಾಯಿ ಸರಪಳಿಯನ್ನು ಕಿತ್ತುಕೊಂಡು ಬರುವಂತೆ ಬೊಗಳುತ್ತಿತ್ತು. ಅಪ್ಪ ಆ ನಾಯಿಗೆ ಇಟ್ಟ ಹೆಸರು 'ಡಾಗ್' ಅಂತ. ನಾವು ಅದನ್ನು 'ಡಾಗ್‌ನಾಯಿ' ಎಂದು ಕರೆಯುತ್ತಿದ್ದೆವು. ಅದನ್ನು ನಾವು ಮಲಗುವಲ್ಲಿ ಕಟ್ಟಿಕೊಳ್ಳಬಹುದಿತ್ತು. ಆದರೆ ಗದ್ದೆಗೆ ಆನೆ ಬಂದಾಗ ಅದು ಬೊಗಳುತ್ತದೆ. ಆನೆಗೆ ನಾಯಿ ಬೊಗಳಿದರೆ ಎಲ್ಲಿಲ್ಲದ ಸಿಟ್ಟು. ಆನೆ ನೇರವಾಗಿ ನಾಯಿ ಇರುವ ಕಡೆಗೇ ಬಂದು ಬಿಡುತ್ತದೆ. ಈ ಅಪಾಯವನ್ನರಿತ ನಾವು ಅದನ್ನು ಮನೆಯಲ್ಲೇ ಕಟ್ಟುತ್ತಿದ್ದೆವು.

ಬೆಳಿಗ್ಗೆ ನಾವು ಮಾಮೂಲಿಯಂತೆ ಶಾಲೆಗೆ ಹೋದೆವು. ಅಂದು ಶನಿವಾರ ಅಂತ ಕಾಣುತ್ತೆ. ಬೇಗನೆ ಬಂದಂತೆ ನೆನಪು. ಕಳೆದ ರಾತ್ರಿ ಹಂದಿಗಳು ನಮ್ಮನ್ನೇ ಹೆದರಿಸಿದ್ದರಿಂದ ಅವುಗಳಿಗೆ ಸರಿಯಾದ ಬುದ್ಧಿ ಕಲಿಸುತ್ತೇನೆಂದು ಮಣ್ಣನ್ನು ಕಲಿಸಿ ಉಂಡೆ ಮಾಡಿದೆ. ನನ್ನ ಹಿಡಿ ಅಳತೆಯ ಇಪ್ಪತ್ತೋ ಮೂವತ್ತೋ ಉಂಡೆಗಳನ್ನು ಮಾಡಿ ಒಣಗಲು ಬಿಸಿಲಿಗಿಟ್ಟೆ. ಸಂಜೆಯಾಗುತ್ತಲೇ ಉಂಡೆ ಪೂರ್ಣ ಒಣಗಲಿಲ್ಲ. ಸೀದ ಗದ್ದೆಗೆ ಓಡಿದೆ. ಅಟ್ಟಪಾಳಿಯ ಬಿಸಿ ಬೂದಿಯೊಳಗೆ ಉಂಡೆಗಳನ್ನು ಹೂತೆ. ಬಿಸಿ ಹೆಚ್ಚಾಗಿಯೋ ಏನೋ ಉಂಡೆಗಳು ಒಡೆದೇ ಹೋದವು. ಇನ್ನುಳಿದವು ಒಣಗಿ ಚೆನ್ನಾಗಿದ್ದವು. ಅವುಗಳನ್ನು ಅಟ್ಟಪಾಳಿಯ ಮಂಚದ ಕೆಳಗಿಟ್ಟು ಮನೆಗೆ ಬಂದೆ. 'ಈ ರಾತ್ರಿ ಮಾತ್ರ ಒಂದು ಹಂದಿಯನ್ನಾದರೂ ಕೊಲ್ಲದೆ ಇರಕಿಲ್ಲ' ಎಂದುಕೊಂಡೆ. ಓವ್! ನಾನೊಮ್ಮೆ ಬೇಟೆ ಕಲಿತಿದ್ದರೆ...!

ರಾತ್ರಿ ನಾವು ಮೂವರು ಗದ್ದೆಯತ್ತ ಹೊರಟೆವು. ಚೂ ಕೊಡಲಿಲ್ಲ. ಏಕೆಂದರೆ ಹಂದಿಗಳು ನಮ್ಮ ಬೊಬ್ಬೆಗೆ ಓಡಿಬಿಟ್ಟಾವು. ಹೇಗೂ ನಾನು ಮಾಡಿಟ್ಟ ಉಂಡೆಯ ರುಚಿ ತೋರಿಸಬೇಕೆಂದು ಕೊಂಡಿದ್ದೆ. ಸ್ವಲ್ಪ ಹೊತ್ತು ಆಲಿಸಿದೆವು. ಯಾವ ಸದ್ದೂ ಕೇಳಲಿಲ್ಲ. ದೂರ ದೂರದ ಗದ್ದೆಯವರು ಬೊಬ್ಬೆ ಹಾಕುವವರು ಬೊಬ್ಬೆ ಹಾಕುತ್ತಾ ಟಿನ್ನು ಬಡಿಯುವವರು ಟಿನ್ನು ಬಡಿಯುತ್ತಾ, ಕೋವಿ ಇರುವವರು ಮೌನವಾಗಿರುತ್ತಾ ಇರಲು, ಇತ್ತ ನಾವು ಉರಿ ಹೆಚ್ಚು ಮಾಡಿ ಓದಿ ಬರೆದು ಮಲಗಿದೆವು. ನನ್ನ ಕಿವಿಗೆ ಕೇಳುವ ಸಣ್ಣ ಪುಟ್ಟ ಸದ್ದೂ ಹಂದಿಗಳದ್ದೇ ಎಂದುಕೊಳ್ಳುತ್ತಿದ್ದೆ. ಆದರೆ ನನ್ನ ನಿರೀಕ್ಷೆ ಸುಳ್ಳಾಯಿತು. ನಿದ್ದೆಯ ಜೊಂಪು ಹತ್ತುತ್ತಿದ್ದಂತೆ ತೇಗದ ತೋಪಿನ ಕಡೆಯಿಂದ 'ಲಟಾರ್' ಅಂತ ಮರ ಮುರಿದ ಸದ್ದಾಯಿತು. ಇನ್ನು ಸ್ವಲ್ಪ ಹೊತ್ತಿಗೆ ಬುಸುಗುಡುತ್ತಾ ಬಿದಿರ ಮಳೆಯನ್ನು ಮುರಿಯುವ ಸದ್ದು ಕೇಳಲು, ಅವ್ವ ಕ್ಷಣದಲ್ಲಿ ಎದ್ದು 'ಅದ್ದಾ ಅದ್ದಾ ಏಯ್ ಏಯ್' ಅನ್ನುತ್ತಿದ್ದಳು. ಹಂದಿಗಳ ಬದಲಿಗೆ ಆನೆ! ಆನೆ ಸರಸರನೆ ಗದ್ದೆಯತ್ತ ಇಳಿದು ಕೆಸರಿನಲ್ಲಿ ಕಾಲೆತ್ತಿ ಇಡುವಾಗಿನ ಜಳಬಳ ಸದ್ದು ಕೇಳುತ್ತಿತ್ತು. ಬೆಳೆಯನ್ನು ಇರಿದು ಇರಿದು ತಿನ್ನುವ, ಬಡ್ ಬಡ್ ಎಂದು ಬೆಳೆಯನ್ನು ಬೆನ್ನಿಗೆ ಬಡಿದುಕೊಳ್ಳುವ ಸದ್ದು ಕೇಳುತ್ತಿತ್ತು. ಬೆಳೆಯ ಬುಡದ ಮಣ್ಣು ಆನೆಯ ಹೊಟ್ಟೆ ಸೇರಬಾರದಲ್ಲ! ಆದ್ದರಿಂದ ಮಣ್ಣನ್ನು ತೆಗೆಯಲು ಆನೆ ತನ್ನ ಮೈಗೆ ಬಡಿದುಕೊಳ್ಳುತ್ತಿತ್ತು. ಸೂಟೆಯನ್ನು ಅವ್ವ ಹೊತ್ತಿಸಿದಳು. ಅದರ ಬೆಳಕು ಗದ್ದೆಯನ್ನೇ ಬೆಳಗಿತು. ಆ ಬೆಳಕಲ್ಲಿ ನಾನು ನಡುಗುವ ಕೈಗಳಿಂದಲೇ ಮಂಚದ ಕೆಳಗಿದ್ದ ಮಣ್ಣಿನ ಉಂಡೆಗಳನ್ನು ಎತ್ತಿಕೊಂಡೆ. ಹಂದಿಗೆ ಹೊಡೆಯಬೇಕಿದ್ದ ಉಂಡೆಗಳನ್ನು ಆನೆಯತ್ತ ಎಸೆದೆ. ಒಂದೊಂದು ಎಸೆತದಲ್ಲೂ ಭೀಮಬಲವನ್ನು ಉಪಯೋಗಿಸಲೆತ್ನಿಸಿದೆ. ಆದರೆ ಯಾವ ಹೊಡೆತವೂ ಗುರಿ ತಲುಪುತ್ತಿರಲಿಲ್ಲ. ಒಂದು ಹೊಡೆತವಾದರೂ ಆನೆಗೆ ಬಡಿಯಿತೋ ಏನೊ? ಅಂತು ಎಲ್ಲಾ ಉಂಡೆಗಳು ಖಾಲಿಯಾದವು. ನನ್ನ ರಟ್ಟೆ ನೋಯತೊಡಗಿತು. ಆನೆ ತನಗಿಷ್ಟ ಬಂದಷ್ಟು ಹೊತ್ತು ನಿಂತು, ತಿಂದು ತಿರುಗಿತು. ನನ್ನ ಪ್ರಯತ್ನವನ್ನು ನೋಡಿದ ಅವ್ವ ಆನೆ ಹೋದ ಬಳಿಕ ನನ್ನನ್ನು ತಬ್ಬಿಕೊಂಡಳು. ಆ ಅಪ್ಪುಗೆಯಲ್ಲಿ ನನ್ನ ರಟ್ಟೆ ನೋವು ಇಲ್ಲವಾಯಿತು. ಅವ್ವ ಆಗ ಮಾತನಾಡಲೇ ಇಲ್ಲ. ಆಕೆಯ ಒಂದೆರಡು ಕಣ್ಣೀರ ಹನಿಗಳು ನನ್ನ ಮೈ ತಾಕಿತು. ನನ್ನ ಗಂಟಲು ಕಟ್ಟಿಹೋಗಿತ್ತು.

*(ಮುಂದಿನ ಸಂಚಿಕೆಯಲ್ಲಿ ಮುಂದುವರಿಯುತ್ತದೆ)*

---

**ದೊಡ್ಡವರ ಹೆಂಡತಿ ಎಲ್ಲರಿಗೂ ಅತ್ತೆ.**

---

# ಬೊಜ್ಜ : ಸಾವಿನ ಸಾಂಕೇತಿಕ ಪ್ರತಿನಿಧೀಕರಣ

– ಡಾ. ಪುರುಷೋತ್ತಮ ಬಿಳಿಮಲೆ

*(ಹಿಂದಿನ ಸಂಚಿಕೆಯಿಂದ)*

ಈ ಕಾರ್ಯಕ್ರಮಕ್ಕೆ ಎಳನೀರು, ಅರಸಿನದ ನೀರು, ಬೆಲ್ಲದ ನೀರು, ಕಳ್ಳು, ನೂಲು, ಬೂದಿ, ದೀಪ, ಒಂದು ಚೆಂಬು ನೀರು ಮತ್ತು ಮಸಿ ತುಂಡು ಬೇಕಾಗುತ್ತದೆ.

ವ್ಯಕ್ತಿಯ ಹೆಣವನ್ನು ಮಲಗಿಸಿದ ಜಾಗದಲ್ಲಿ ಮೊದಲು ತೆಳುವಾಗಿ ಬುದಿಯನ್ನು ಹರಡುತ್ತಾರೆ. ಶವದ ತಲೆ ಇದ್ದ ಜಾಗದಲ್ಲಿ ಕೆತ್ತಿನೀರು ಕಾಣುವಂತೆ ಇರುವ ಎಳನೀರೊಂದನ್ನು ಇರಿಸುತ್ತಾರೆ. ಕಾಲಿನ ಜಾಗದಲ್ಲಿ ಒಂದು ಚೆಂಬು ನೀರು ಇರಿಸುತ್ತಾರೆ. ಅನಂತರ ಉದ್ದವಾದ ಒಂದು ನೂಲಿನ ತುದಿಗೆ ಅರಸಿನ ತುಂಡನ್ನು ಕಟ್ಟಿ, ಆ ಅರಸಿನ ತುದಿಯನ್ನು ಎಳನೀರಿಗೆ ತಾಗುವಂತೆ ಇರಿಸುತ್ತಾರೆ. ಮಸಿತುಂಡನ್ನು ಕೂಡಾ ಹೀಗೆಯೇ ಕಟ್ಟಿ ಚೆಂಬಿನಲ್ಲಿರುವ ನೀರಿಗೆ ತಾಗಿಸಿ ಕಟ್ಟುತ್ತಾರೆ. ಅನಂತರ ಒಂದು ಕುಂಬಳಕಾಯನ್ನು ಕಡಿದು, ತುಂಡರಿಸಿ, ಅದಕ್ಕೆ ಕೈ ಮುಗಿದು ಎಲ್ಲರೂ ಹಿಂದಿರುಗುತ್ತಾರೆ. ಸುದ್ದಕ್ಕೆ ನಿಂತಾತ ಮಾತ್ರ ತಲೆಗೆ ಬಿಳಿ ಬಟ್ಟೆ ಹೊದ್ದುಕೊಂಡು, ಒಂಟಿಕಾಲಲ್ಲಿ ನಿಂತು, ಮೃತನನ್ನು ಉದ್ದೇಶಿಸಿ "ನೀರು ನೆರ್ಲಿಗೆ ಇಸೊಳೊ, ಬಂದು ಹೋಗಿ" ಎಂದು ಮೂರು ಸಲ ಕರೆಯುತ್ತಾನೆ. ಅನಂತರ ಆತನೂ ಹಿಂದಿರುಗುತ್ತಾನೆ. ಮರುದಿನ ಪ್ರಾತಃಕಾಲ ಆತ ಇನ್ನೊಮ್ಮೆ ಹಾಗೆಯೇ ಕರೆಯುತ್ತಾನೆ. ಇದನ್ನು 'ಮುರ್ರೊ ಹೊರ್ದು' ಎನ್ನುತ್ತಾರೆ. ಅನಂತರ ಬಂದು ನೋಡಿದಾಗ ಎಳನೀರು ಮತ್ತು ಚೊಂಬಿನಲ್ಲಿ ಇಟ್ಟಿರುವ ನೀರು ಕಡಿಮೆಯಾಗಿರುವುದನ್ನು ಜನರು ಗುರುತಿಸುತ್ತಾರೆ. ನೀರಿಗೆ ತಾಗಿಕೊಂಡಿದ್ದ ಅರಸಿನ ಕೊಂಬು ಮತ್ತು ಮಸಿತುಂಡು ಈಗ ನೀರಿನಿಂದ ಬೇರ್ಪಟ್ಟಿದೆ ಎನ್ನಲಾಗುತ್ತದೆ. ಮೃತನ ಆತ್ಮ ಬಂದು ನೀರನ್ನು ಕುಡಿದಿರುವುದೇ ಇದಕ್ಕೆ ಕಾರಣ ಎನ್ನಲಾಗುತ್ತದೆ.

ಅನಂತರ ಸೂರ್ಯೋದಯವಾಗುತ್ತಲೇ ಮೃತನ ಕುಟುಂಬಸ್ಥರು 'ಸುಡ್ಕುಳಿ' ಜಾಗಕ್ಕೆ ಹೋಗುತ್ತಾರೆ. ಅಲ್ಲಿರುವ ದೂಪೆಯ ಸುತ್ತ ಬಿದಿರಿನ ಬೇಲಿಯನ್ನು ಕಟ್ಟುತ್ತಾರೆ. ಇದಕ್ಕೆ 'ಕೋಟೆ' ಎಂದು ಹೆಸರು. ಕೋಟೆಯ ದಕ್ಷಿಣ ಮತ್ತು ಉತ್ತರ ದಿಕ್ಕಿಗೆ ಎರಡು ಪುಟ್ಟ ಬಾಗಿಲುಗಳನ್ನು ರಚಿಸಿ, ಆ ಬಾಗಿಲುಗಳಿಗೆ ಬಾಳೆಯನ್ನು ಕಟ್ಟುತ್ತಾರೆ. ಅನಂತರ ದೂಪೆಯ ಸುತ್ತ ಮಾವಿನೆಲೆಯ ತೋರಣವನ್ನು ಕಟ್ಟುತ್ತಾರೆ. ಇಷ್ಟಾಗುವಾಗ ಮನೆಯಲ್ಲಿ 'ಕೂಳಿಗೆ ಇಡುವ' ಕಾರ್ಯಕ್ರಮ ನಡೆಯುತ್ತದೆ. ಇದು ಮನೆಯ ಜಗಲಿಯಲ್ಲಿ ನಡೆಯುವ ಕಾರ್ಯಕ್ರಮವಾಗಿದೆ. ಜಗಲಿಯಲ್ಲಿ ಮಣೆಯೊಂದನ್ನು ಇರಿಸಿ, ಅದಕ್ಕೆ ಬಿಳಿಬಟ್ಟೆ ಹೊದಿಸಿ, ಅದರ ಮೇಲೆ ಸುದ್ದಕ್ಕೆ ನಿಂತಾತನನ್ನು ಕುಳ್ಳಿರಿಸುತ್ತಾರೆ. ಆತನ ಎಡಬದಿಗೆ ದೀಪವೊಂದನ್ನು ಉರಿಸಿಡುತ್ತಾರೆ. ಅನಂತರ ಊರ ಪ್ರಮುಖರು ಆತನ ತಲೆಗೆ ಅಕ್ಕಿ ತಳೆಯುವರು. ಹೀಗೆ ತಳೆದ ಅಕ್ಕಿಯನ್ನು ಸಂಗ್ರಹಿಸಿ, ಅನ್ನ ಮಾಡುತ್ತಾರೆ. ಆ ಅನ್ನವನ್ನು ಬಿಳಿಬಟ್ಟೆಯಲ್ಲಿ ಗಂಟುಕಟ್ಟಿಕೊಂಡು ಸುದ್ದಕ್ಕೆ ನಿಂತಾತನು ದೂಪೆಯ ಬಳಿಗೆ ಬರುತ್ತಾನೆ. ಬಂದು ದೂಪೆಗೆ ಅಪ್ರದಕ್ಷಿಣಾಕಾರದಲ್ಲಿ ಮೂರು ಸುತ್ತ ತಿರುಗಿ, ದೂಪೆಯ ದಕ್ಷಿಣ ದಿಕ್ಕನಲ್ಲಿ 'ಇರ್ಮುಂಡಿ' ಹಾಕಿ ಕುಳಿತುಕೊಳ್ಳುತ್ತಾನೆ ಅನಂತರ ತಾವು ತಂದ ತಿಂಡಿಗಳನ್ನೆಲ್ಲ ದೂಪೆಯ ಇದಿರಿಗೆ ಇಡುತ್ತಾರೆ. ಇಷ್ಟು ಕೈಮುಗಿದಾದ ಮೇಲೆ ಬಂದವರಲ್ಲಿ ಒಬ್ಬಾತ ಹೀಗೆ ಹೇಳುತ್ತಾನೆ."

ದೇವ್ರ್ ಹೆಂಗೆ ಬರ್ದನೋ ಹಾಂಗೆ ಬೊದ್ಕಿದೆ. ಮನೆಗೆ ಒಳ್ಳೆದ್ ಮಾಡ್ದೆ. ಕುಟುಂಬದವರ ಒಳ್ಳೆದ್‌ಲಿ ನೋಡ್ಕಂಡೆ, ಬೇಕಾದ ಬೊದ್ಕ್ ಮಾಡಿ ಮಕ್ಕಳಿಗೆ, ಮರಿಗಳಿಗೆ ಉಳ್ಸಿದೆ. ಎಲ್ಲವೂ ಸೈ ಎಂದ್ ಹೇಳುವಂಗೆ ಬಾಳ್ವೆ ಮಾಡ್ದೆ. ಇಂದಿಗೆ ನಿಂಗೆ ಈ ಮಣ್ಣಿನ ಋಣ ತೀರ್ತ್. ನಿನ್ನ ಹೆಸರ್ಲಿ ನಾವು ನಾಕ್ ಜನ ಇಂದ್ ಇಲ್ಲಿಗೆ ಬಂದೊಳೊ. ನಾವು ತಂದದರ ನೀವು ತಕೊಂಕು, ಸ್ವರ್ಗಕ್ಕೇ ಹೋಗಿ". ಎಂದು ಸ್ವರ್ಗಕ್ಕೆ ಒಪ್ಪಿಸುವರು. ಅನಂತರ ಎಲ್ಲರೂ ದೂಪೆಗೆ ಕೈ ಮುಗಿದು ಮನೆಗೆ ಹಿಂದಿರುಗುತ್ತಾರೆ. ಹಿಂದೆ ಬರುವಾಗ ಯಾರೂ ದೂಪೆಯ ಕಡೆ ತಿರುಗಿ ನೋಡಬಾರದೆಂಬ ನಿಷೇಧವಿದೆ. ಮನೆ ಪ್ರವೇಶಿಸುವ ಮುನ್ನ ಮಡಿವಾಳ ಇವರನ್ನು ಶುದ್ಧಗೊಳಿಸುತ್ತಾನೆ. ಅನಂತರ ಮನೆಯೊಳಗೆ ಅಡುಗೆ ಮನೆಯಲ್ಲಿ ಇರುವ ಕನ್ನಿಕಂಬದ ಬುಡದಲ್ಲಿ 'ಕೊಲೆಗಿಡುವ ಶಾಸ್ತ್ರ'ನಡೆಯುತ್ತದೆ. ಕನ್ನಿಕಂಬದ ಇದಿರಲ್ಲಿ 16ಬಾಳೆ ಎಲೆಗಳನ್ನು ಹಾಸಿ, ಅದಕ್ಕೆ ರೊಟ್ಟಿ, ಕೋಳಿ ಮಾಂಸ ಹಾಕಿ ಕೈ ಮುಗಿದು, ಮೃತನನ್ನು ಕರೆದು ಆಹಾರ ಸ್ವೀಕರಿಸಲು ಕೇಳಿಕೊಳ್ಳುವರು.

ಅನಂತರ ಎಲ್ಲರೂ 'ಬೊಜ್ಜದೂಟ'ಮಾಡುತ್ತಾರೆ. ಸಾಮಾನ್ಯವಾಗಿ ಈ ಊಟಕ್ಕೆ ಬರುವವರು, ಬರುವಾಗಲೇ 'ಸರಕು'ತರುತ್ತಾರೆ. ಸರಕಿನಲ್ಲಿ ಅಕ್ಕಿ, ತರಕಾರಿ ಮತ್ತು ಕೆಲವು ಬಗೆಯ ತಿಂಡಿ ಇರುತ್ತದೆ. 'ಸರಕ್ಕ'ನ್ನು ಬೊಜ್ಜದೂಟಕ್ಕೆ ಬಳಸುತ್ತಾರೆ. ಈ ಬೊಜ್ಜದೂಟದಲ್ಲಿ ಕಡಬು ಮತ್ತು ಬಾಳೆಕಾಯಿಂದ ಮಾಡಿದ ಪಲ್ಯ ಕಡ್ಡಾಯವಾಗಿ ಇರಲೇಬೇಕು. ಕಡಬು ಚಪ್ಪಟೆಯಾಗಿ ಉದ್ದವಾಗಿರುತ್ತದೆ. ಉಳಿದಂತೆ ಅವರವರ ಆರ್ಥಿಕ ಸ್ಥಿತಿಗೆ ಅನುಗುಣವಾದ ಊಟ ಸಿದ್ಧಪಡಿಸುತ್ತಾರೆ. ಕುಟುಂಬದೊಳಗೆ ಮನಸ್ತಾಪವಿದ್ದರೆ ಅದು ಈ ದಿನ ಇತ್ಯರ್ಥವಾಗುತ್ತದೆ.

**ಹದಿನಾರರ ಕೊಲೆ**

ವ್ಯಕ್ತಿಯು ಮೃತಪಟ್ಟು ಹದಿನಾರನೇ ದಿವಸದಂದು 'ಹದಿನಾರರ ಕೊಲೆ' ಎಂಬ ಕಾರ್ಯಕ್ರಮ ನಡೆಯುತ್ತದೆ. ಸತ್ತವನು 'ಕೊಲೆ'ಯ ರೂಪದಲ್ಲಿ ಇರುತ್ತಾನೆಂಬ ನಂಬಿಕೆ ಗೌಡರಲ್ಲಿದೆ. ಅಡುಗೆ ಮನೆಯಲ್ಲಿ ಮತ್ತೆ ಹಿಂದಿನಂತೆ ಕನ್ನಿಕಂಬದ ಇದಿರು 16ಎಲೆ ಹಾಕುತ್ತಾರೆ. ಒಂದು ಎಲೆಯನ್ನು ಇನ್ನೊಂದು ಸಾಲಿನಲ್ಲಿ ಇರಿಸುತ್ತಾರೆ. ಎಲ್ಲದಕ್ಕೂ ರೊಟ್ಟಿ, ಕೋಳಿ ಅಥವಾ ಮಾಂಸ ಹಾಕಿ ಕೈ ಮುಗಿಯುತ್ತಾರೆ. ಆಹಾರವನ್ನು ಸ್ವೀಕರಿಸಲು 'ಕೊಲೆ'ಯನ್ನು ಆಹ್ವಾನಿಸುತ್ತಾರೆ. ಸ್ವಲ್ಪ ಹೊತ್ತು ಎಲ್ಲರೂ ಬಾಳೆ ಎಲೆಗೆ ಬೆನ್ನು ಹಾಕಿ ಒಂದು ನಿಮಿಷ ತಿರುಗಿ ನಿಲ್ಲುತ್ತಾರೆ. ಅನಂತರ ಎಲೆಗೆ ಇನ್ನೊಮ್ಮೆ ಕೈಮುಗಿದು, ಇನ್ನೊಂದು ಸಾಲಿನಲ್ಲಿ ಇರಿಸಲಾದ

ಬಾಳೆ ಎಲೆಯನ್ನು 16ಎಲೆಗಳೊಂದಿಗೆ ಜೋಡಿಸಿ,16ಎಲೆಗಳಿಂದ ಒಂದನ್ನು ತೆಗೆದುಬಿಡುತ್ತಾರೆ. ಅನಂತರ ಎಲ್ಲರೂ ಸಾಮೂಹಿಕವಾಗಿ ಮಾಂಸದೂಟ ಮಾಡುತ್ತಾರೆ. ಅಂದರೆ 16 ಹಿರಿಯರನ್ನು ನೆನೆಯುವುದು ರೂಡಿಯಲ್ಲಿದೆ.

**ಅವ್ವು**

ಬಹುಮಟ್ಟಿಗೆ ಇದು ಮೃತನಿಗೆ ಮಾಡುವ ಕೊನೆಯ ಆಚರಣೆ. ದೀಪಾಳಿಯಂದು, ಅಡುಗೆ ಕೋಣೆಯಲ್ಲಿರುವ ಕನ್ನಿ ಕಂಬದ ಬುಡದಲ್ಲಿ ಎಲೆ ಹಾಕಿ, ಅದಕ್ಕೆ ಅರಳು ಹಾಕಿ, ಬಾಳೆಹಣ್ಣು ಇರಿಸಿ, ದೀಪ ಉರಿಸಿ ಕುಟುಂಬ ಸಮಸ್ತರೆಲ್ಲ ಕೈಮುಗಿಯುತ್ತಾರೆ. ಅನಂತರ ಮೃತನ ಹೆಸರಲ್ಲಿ ಎಲ್ಲರೂ ಊಟ ಮಾಡುತ್ತಾರೆ.

ಹೀಗೆ ಸಾವನ್ನು ಗೌಡರು ಅತ್ಯಂತ ಮುಖ್ಯವಾದ ಘಟ್ಟವೆಂದು ಭಾವಿಸುತ್ತಾರೆ. ಅದಕ್ಕೆ ಸಂಬಂಧಿಸಿದ ಎಲ್ಲ ಕ್ರಿಯೆಗಳನ್ನು ಅತ್ಯಂತ ಜಾಗ್ರತೆಯಿಂದ ನಿರ್ವಹಿಸುತ್ತಾರೆ. ಮೃತನು'ಕೊಲೆ'ಯ ರೂಪದಲ್ಲಿರುತ್ತ ಮನೆ ಮಂದಿಗಳನ್ನು ರಕ್ಷಿಸುತ್ತಿರುತ್ತದೆ ಎಂದು ಅವರು ನಂಬುತ್ತಾರೆ. ಈ ಕಾರಣದಿಂದ ಮನೆಯಲ್ಲಿ ನಡೆಯುವ ವಿಶೇಷ ಭೋಜನದ ಸಂದರ್ಭಗಳಲ್ಲಿ, ಬಾಳೆ ಎಲೆಯಲ್ಲಿ 'ಕೊಲೆ'ಗೆ ಆಹಾರವಿಡುವ ಕ್ರಮವಿದೆ. 'ಕೊಲೆ'ಗೆ ಏನಾದರೂ ಅಸಮಾಧಾನವಾದರೆ, ಅದು ತನಗೆ ಪ್ರಿಯರಾದವರ ಮೈಮೇಲೆ ಉಗುರಿನ ಗುರುತು ಮಾಡಿ ಅಸಮಾಧಾನವನ್ನು ಪ್ರಕಟಿಸುತ್ತದೆ ಎಂದೂ ಜನ ಭಾವಿಸುತ್ತಾರೆ. ಮದುವೆಯಾಗದೆ ಸತ್ತವರು ಕೊಲೆಯಾಗಿ ಮಾರ್ಪಟ್ಟು ಅನಂತರವೂ ತಮ್ಮ ಮದುವೆಗಾಗಿ ಜನರನ್ನು ಪೀಡಿಸುವುದಿದೆ. ಆಗ ಜನರು 'ಕೊಲೆ ಮದುವೆ' ಮಾಡುತ್ತಾರೆ.

ಈ ಲೇಖನದ ಆರಂಭದಲ್ಲಿ ಸೂಚಿಸಿರುವಂತೆ, ಅಂತ್ಯ ಸಂಸ್ಕಾರದ ಬಗೆಗೆ ಇದುವರೆಗೆ ನಡೆದ ಅಧ್ಯಯನಗಳು ಬಹುಮಟ್ಟಿಗೆ ಬ್ರಾಹ್ಮಣರ ವಿವರಣೆಗಳಿಗೆ ಸೀಮಿತವಾಗಿವೆ. ಬ್ರಾಹ್ಮಣೇತರರಲ್ಲಿರುವ ಆಚರಣೆಗಳ ಸಂಗ್ರಹವಾಗಲಿ, ವ್ಯಾಖ್ಯಾನವಾಗಲಿ ನಡೆದಿಲ್ಲ. ಹ್ಯಾಮಿಲ್ಟನ್ ಅವರು 17ಅಂತ್ಯ ಸಂಸ್ಕಾರದ ವಿಧಿಗಳನ್ನು, ನಾವು ಬದುಕುತ್ತಿರುವ ವಾಸ್ತವ ಜಗತ್ತಿನ ರಚನೆಗಳಿಗೆ ವಿರುದ್ಧವಾದ ಜಗತ್ತಿನಲ್ಲಿ ನಡೆಯುವ ಕ್ರಿಯೆಗಳೆಂದು ಬಣ್ಣಿಸುತ್ತಾರೆ(HAMILTON 1976). ಇದು ರಚನಾವಾದಿಗಳು ಅನುಸರಿಸುವ ಸಾಮಾನ್ಯವಾದ ವಿಧಾನವಾಗಿದೆ. ಇರುವ ಜಗತ್ತು ಮತ್ತು ಇಲ್ಲದಿರುವ ಜಗತ್ತುಗಳ ನಡುವಣ ಸಂಬಂಧ ಮತ್ತು ಸಂಘರ್ಷಗಳನ್ನು ಸೂಕ್ಷ್ಮವಾಗಿ ವಿವರಿಸುವ ಅವರು, ಆ ಮೂಲಕ ಜನರು ಸ್ಥಾಪಿಸಿಕೊಳ್ಳುವ ಸಮನ್ವಯವನ್ನು ಪರೀಕ್ಷಿಸುತ್ತಾರೆ. ರಚನಾವಾದಿಗಳಿಗಿಂತ ಸ್ವಲ್ಪ ಭಿನ್ನವಾಗಿ ಬರ್ಗರ್‌ನು ಯೋಚಿಸುತ್ತಾನೆ. ಆತ ಮಾನವನು ತನ್ನ ಅಗತ್ಯಗಳಿಗಾಗಿ ನಿರ್ವಚಿಸಿಕೊಂಡ ಸಮಾಜಕ್ಕೂ, ಸಾವು ತನ್ನ ಅಗತ್ಯಗಳಿಗಾಗಿ ನಿರ್ವಚಿಸಿಕೊಂಡ ಸಮಾಜಕ್ಕೂ ಇರುವ ಅಂತರಗಳನ್ನು ಎಚ್ಚರದಿಂದ ಪರಿಶೀಲಿಸುತ್ತಾನೆ. (Berger 1978). ಈ ವ್ಯತ್ಯಾಸಗಳ ನಡುವಣ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸ್ವರೂಪವನ್ನು ಆತ ವಿಶ್ಲೇಷಿಸುತ್ತಾನೆ. ಈ ಅರ್ಥದಲ್ಲಿ ಬರ್ಗರ್‌ನ ಅಧ್ಯಯನ ಹೆಚ್ಚು ಸಾಮಾಜಿಕವಾದುದು, ಮತ್ತು ಸಾಂಸ್ಕೃತಿಕವಾದುದು. ಬಹುಶಃ ಅಂತ್ಯ ಸಂಸ್ಕಾರಗಳ ಬಗೆಗೆ ನಡೆದ ಅಧ್ಯಯನಗಳ ಜನಪ್ರಿಯ ರೂಪವನ್ನು ಈ ಇಬ್ಬರು ವಿದ್ವಾಂಸರು ಪ್ರತಿನಿಧಿಸುತ್ತಾರೆ. ಮೀನಾ ಕೌಶಿಕ್ ಅವರದ್ದು ಬೇರೆಯೇ ಹಾದಿ. ಅವರು ಅಂತ್ಯ ಸಂಸ್ಕಾರದ ಸಾಂಕೇತಿಕತೆಯನ್ನು ಸಂತಾನದ ಸಾಂಕೇತಿಕತೆ, ಪ್ರಾದೇಶಿಕ ಸಾಂಕೇತಿಕತೆ, ಅಡುಗೆಯ ಸಂಕೇತಿಕತೆ ಮತ್ತು ಧ್ವನಿ ಸಾಂಕೇತಿಕತೆಯೆಂದು ನಾಲ್ಕು ರೀತಿಯಂದ ವಿಭಜಿಸಿಕೊಂಡು ಅಧ್ಯಯನ ನಡೆಸಿದ್ದಾರೆ. (Meena Kaushik 1976) ಭಾರತೀಯ ಸಮಾಜವನ್ನು ಮಡಿ-ಮೈಲಿಗೆಯ ನಿರಂತರತೆಯಲ್ಲಿ ವಿಶ್ಲೇಷಿಸಿದ ಫ್ರೆಂಚ್ ಸಮಾಜ ವಿಜ್ಞಾನಿ ಡ್ಯೂಮೋ ವರು ಅಂತ್ಯ ಸಂಸ್ಕಾರದ ವಿಧಿಗಳನ್ನು ಮೈಲಿಗೆಯನ್ನು ಕಳಿಯುವ ಕ್ರಿಯಾಚರಣೆ ಎಂದು ಭಾವಿಸುತ್ತಾರೆ(Dumount 1980). ಎಂ. ಎಸ್. ಶ್ರೀನಿವಾಸರು ಕೂಡಾ ಡ್ಯೂಮೋ ಅವರ ವಾದಕ್ಕೆ ಇನ್ನಷ್ಟು ಪುರಾವೆಗಳನ್ನು ಒದಗಿಸುತ್ತಾರೆ.(Srinivasa M.N. 1978).ರಚನಾವಾದಿಗಳ ವಿಶ್ಲೇಷಣೆಯನ್ನು ಮುಂದುವರಿಸಿದ ಹರ್ಟ್ಜ್ ಅವರು ಸಾವಿನಾಚರಣೆಗಳಲ್ಲಿ ನಿರ್ಣಾಯಕವಾಗಿರುವ ಎಡಗೈ-ಬಲಗೈ ವ್ಯತ್ಯಾಸಗಳನ್ನು ನಿಖರವಾಗಿ ಗುರುತಿಸುತ್ತಾರೆ. ಇವರೆಲ್ಲರಿಗಿಂತ ಭಿನ್ನವಾಗಿ ಸತ್ಯನಾಥ್ ಅವರು ಅಂತ್ಯ ಸಂಸ್ಕಾರದ ವಿಧಿಗಳನ್ನು ಪುನರ್ಜನ್ಮದ ಹಿನ್ನೆಲೆಯಲ್ಲಿ ವ್ಯಾಖ್ಯಾನಿಸುತ್ತಾ'ಪ್ರಾದೇಶಿಕ ಸಂಸ್ಕೃತಿಯ ಯೋಚನಾ ಕ್ರಮ ಮತ್ತು ಪ್ರತಿಕ್ರಿಯೆಗನ್ನು ಅರ್ಥಮಾಡಿಕೊಳ್ಳುವ ಸಾಧ್ಯತೆಗಳಿಗೆ ನಮ್ಮ ಗಮನ ಸೆಳೆದಿದ್ದಾರೆ.(1988).

ಪ್ರಸ್ತುತ ಲೇಖನಕ್ಕೆ ಮೇಲೆ ಹೇಳಿದ ವಿದ್ವಾಂಸರುಗಳ ವಾದವನ್ನು ತಿರಸ್ಕರಿಸುವ ಅಥವಾ ಪುರಸ್ಕರಿಸುವ ಉದ್ದೇಶ ಇಲ್ಲ. ಗೌಡರ ಅಂತ್ಯ ಸಂಸ್ಕಾರದ ವಿಧಿಗಳ ಸಂದರ್ಭದಲ್ಲಿ ಅವೆಲ್ಲ ಎಷ್ಟು ಪ್ರಸ್ತುತ ಎಂದು ಪರಿಶೀಲಿಸುವುದೂ ನನ್ನ ಗುರಿ ಅಲ್ಲ. ಬದಲು ಗೌಡರ ಅಂತ್ಯ ಸಂಸ್ಕಾರದಲ್ಲಿ ಕಂಡುಬರುವ ನಾಲ್ಕು ಪ್ರಧಾನ ಅಂಶಗಳ ಕುರಿತು ಇಲ್ಲಿ ಚರ್ಚಿಸಲಾಗಿದೆ. ಈ ನಾಲ್ಕು ಪ್ರಮುಖ ಅಂಶಗಳ ಗ್ರಹಿಕೆಯು ಇದುವರೆಗೆ ನಡೆದ ಅಧ್ಯಯನಗಳಿಗೆ ಪ್ರತಿಕ್ರಿಯೆಯಾಗಿ ಬಂದಿದೆ ಎಂದು ಬೇಕಾದರೆ ಹೇರಬಹುದು. ಅವು ಸ್ಥೂಲವಾಗಿ ಬ್ರಾಹ್ಮಣೇತರರಲ್ಲಿರುವ ಕ್ರಿಯಾವಿಧಿಗಳ ಬಗ್ಗೆ ನಮ್ಮ ಗಮನವನ್ನು ಸೆಳೆದಾವುಎಂದು ನಾನು ಭಾವಿಸುತ್ತೇನೆ. ಗಮನಿಸಬೇಕಾದ ನಾಲ್ಕು ಅಂಶಗಳೆಂದರೆ

1.ಸಾವಿನಾಚರಣೆಗಳನ್ನು 'ವಿರುದ್ಧ ಜಗತ್ತು'ಎಂದು ಕರೆಯುವುದಕ್ಕಿಂತ, 'ಮಧ್ಯಂತರ ಜಗತ್ತಿನ ಚಟುವಟಿಕೆ'ಎಂದು ಕರೆಯುವುದೇ ಹೆಚ್ಚುಸರಿ. ಈ ಮಧ್ಯಂತರ ಜಗತ್ತು ವ್ಯಕ್ತಿಯು ತೀರಿಕೊಂಡ ದಿನದಿಂದ ಮುಂದೆ 16 ದಿವಸಗಳ ಕಾಲ ಅಸ್ತಿತ್ವದಲ್ಲಿದ್ದು ಅನಂತರ ನಶಿಸಿ ಹೋಗುತ್ತದೆ.

2. ಬ್ರಾಹ್ಮಣರ ಅಂತ್ಯ ಸಂಸ್ಕಾರಗಳ ವಿಧಿಗೂ, ಬ್ರಾಹ್ಮಣೇತರರಲ್ಲಿರುವ ವಿಧಿಗೂ ಮೂಲಭೂತ ವ್ಯತ್ಯಾಸವಿದೆ. ಇದು ಸ್ಪಷ್ಟವಾಗುವುದು ಪಿತೃಗಳ ಸಂಖ್ಯೆಯಲ್ಲಿ. ಬ್ರಾಹ್ಮಣರಲ್ಲಿ ಅದು ಮೂರು. ಗೌಡರಲ್ಲಿ ಹದಿನಾರು.

3. ಅಂತ್ಯ ಸಂಸ್ಕಾರದ ವಿಧಿಗಳು ಮೂಲತಃ ಕುಟುಂಬಕ್ಕೆ ಸಂಬಂಧಿಸಿದ್ದೇ. ಉಳಿದವರೇನಿದ್ದರು ಅದಕ್ಕೆ ಸಹಕಾರಿಗಳು ಅಷ್ಟೇ.

ಹಂಬಲ ಹಿರಿದಾಗೆ ಸಿದ್ಧಿ ಹತ್ತಿರವಾಗುತ್ತದೆ. — ತೀ. ನಂ. ಶ್ರೀ.

4. ಚಂದ್ರನ ಚಲನೆಗೆ ಸಂಬಂಧಿಸಿದಂತೆ ಗೌಡರು ಮಾಡಿಕೊಂಡಿರುವ ಕಾಲಕಲ್ಪನೆಯಲ್ಲಿ ಕಾಲವು ಪುನರಾವರ್ತನೆಗೊಳ್ಳದ ಸಂಗತಿಯಾಗಿದೆ. ಹಾಗಗಿ ಇಲ್ಲಿ ಪುನರ್ಜನ್ಮದ ಪರಿಕಲ್ಪನೆಗೆ ಅವಕಾಶವಿಲ್ಲ.

**1. ಹದಿನಾರು ದಿನಗಳ ಮಧ್ಯಂತರ ಜಗತ್ತು**

ನಮ್ಮ ನಡುವೆ ಮಾತಾಡುತ್ತ, ಓಡಾಡಿಕೊಂಡಿದ್ದ ವ್ಯಕ್ತಿಯು ಸತ್ತ ಅನಂತರ 'ಇಲ್ಲ'ವಾಗುತ್ತಾನೆ. 'ಇಲ್ಲ' ಎಂಬುದು ಇರುವುದಕ್ಕೆ ವಿರೋಧವಾಗಿರುವುದರಿಂದ 'ಇಲ್ಲ'ವಾದದ್ದರ ಸುತ್ತ ಹೆಣೆಯಲಾದ ಆಚರಣೆಗಳನ್ನು 'ವಿರುದ್ಧ ಜಗತ್ತು' ಎಂದು ಸಹಜವಾಗಿ ಕರೆಯಲಾಗಿದೆ. ರಾಚನಿಕರ ತರ್ಕಕ್ಕೆ ಸುಲಭವಾಗಿ ಎಟಕುವ ವಿಚಾರ ಇದಾಗಿದೆ. ಆದರೆ ಸಾವಿನಾಚರಣೆಗಳಲ್ಲಿ ಸತ್ತವನನ್ನು ನಿಜವಾಗಿಯೂ 'ಇಲ್ಲ' ಎಂದು ಭಾವಿಸಲಾಗುವುದೇ? ಒಂದು ವೇಳೆ ಹಾಗೆ ಭಾವಿಸುವುದಾದರೆ ಇಡೀ ಆಚರಣೆಗಳನ್ನು ಯಾವ ಕಾರಣಕ್ಕೆ ನಡೆಸುತ್ತಾರೆ? ಇಂಥ ಪ್ರಶ್ನೆಗಳನ್ನು ಕೇಳಿಕೊಂಡಾಗ ಸಿಗುವ ಉತ್ತರಗಳು ಬಹಳ ಸಂಕೀರ್ಣವಾದುವು. ಗೌಡರಂತೂ ಮೃತಪಟ್ಟ ವ್ಯಕ್ತಿಯನ್ನು, ನಿಜವಾದ ಅರ್ಥದಲ್ಲಿ ಕಳೆದುಕೊಂಡಿದ್ದರೂ, ಕನಿಷ್ಠ 16ದಿವಸಗಳ ಕಾಲ ಮೃತನು ಕೋಲೆಯ ರೂಪದಲ್ಲಿ ತಮ್ಮೊಡನೆಯೇ ಇರುತ್ತಾನೆಂದೂ ಭಾವಿಸುತ್ತಾರೆ. ಹಾಗೆ ಭಾವಿಸುವುದರಿಂದಲೇ ಸತ್ತು ಹೋದ ವ್ಯಕ್ತಿಗೆ, ಸಾಯದಿರುವ ವ್ಯಕ್ತಿ ಏನೆಲ್ಲ ಬೇಕೋ ಅದನ್ನೆಲ್ಲ ಒದಗಿಸುತ್ತಿರುತ್ತಾರೆ. ನೀರು, ಆಹಾರ ಮತ್ತು ಸ್ಥಳವೊಂದನ್ನು ಮೃತನಿಗೂ ಕೊಡಲಾಗುವುದು. 'ನೀರ್‌ನೆರ್ಲಿಗೆ ಇಸುದು' ಎಂಬ ಕಾರ್ಯಕ್ರಮದಲ್ಲಿ ಮೃತನು ನೀರು ಕುಡಿಯುವುದನ್ನು ಜನರು ಖಾತ್ರಿಪಡಿಸಿಕೊಳ್ಳುತ್ತಾರೆ. ಸುಡ್ಕುಳಿ ಮತ್ತು ಬೊಜ್ಜದೂಟದಲ್ಲಿ ಆಹಾರವನ್ನಿಟ್ಟು, ಅದನ್ನು ಸೇವಿಸಲು ಆಹ್ವಾನಿಸುತ್ತಾರೆ. ಮೃತನ ಶವವನ್ನಿರಿಸಿದ ಜಾಗದಲ್ಲಿ ಬೂದಿಹರಡಿ, ಅದರಲ್ಲಿ ಮೃತನ ಹೆಜ್ಜೆ, ಗುರುತುಗಳನ್ನು ಕಾಣುತ್ತಾರೆ. ಮೃತನು ಮನೆಯೊಳಗೆ ನಡೆದಾಡಿದ ಸಪ್ಪಳವನ್ನು, ಸ್ನಾನ ಮಾಡಿದ ಸಪ್ಪಳವನ್ನು ಮನೆಯವರು ಕೇಳಿಸಿಕೊಂಡು ತಮ್ಮ ಆಪ್ತರಿಗೆ ಅದನ್ನು ವರದಿ ಮಾಡುತ್ತಾರೆ. ಹೀಗೆ ಮೃತನು ತೀರಿಕೊಂಡ ದಿನದಿಂದ ಮುಂದಿನ 16 ದಿವಸಗಳವರೆಗೆ ಮೃತನಿಗೆ ಮನೆಯೊಳಗಡೆ ಸ್ಥಾನ ಕಲ್ಪಿಸಲಾಗಿದೆ.

'ಹದಿನಾರರ ಕೋಲೆ'ಯೆಂದು ನಡೆಸುವ ಕ್ರಮಗಳನ್ನು ಈಗಾಗಲೇ ವಿವರಿಸಲಾಗಿದೆ. ಆದಿನ ಒಟ್ಟು 16ಎಲೆಗಳನ್ನು ಒಂದು ಸಾಲಲ್ಲಿ ಇರಿಸಿ, ಇನ್ನೊಂದು ಎಲೆಯನ್ನು ಬೇರೆ ಸಾಲಲ್ಲಿ ಇರಿಸುತ್ತಾರೆ. ಈ ಎಲೆಗಳಲ್ಲಿ ಆಹಾರ ಇರಿಸಿ, ಕೈಮುಗಿದು ಕೊನೆಯಲ್ಲಿ 16ರಿಂದ ಒಂದು ಎಲೆಯನ್ನು ಹೊರತೆಗೆಯುತ್ತಾರ ಮತ್ತು ಬೇರೆ ಸಾಲಲ್ಲಿ ಇರಿಸಿದ ಎಲೆಯನ್ನು ಮೇಲಿನ ಸಾಲಿಗೆ ಸೇರಿಸಿ, 16ಎಲೆಗಳನ್ನು ಉಳಿಸಿಕೊಳ್ಳುತ್ತಾರೆ. ಇದಕ್ಕಾಗಿಯೇ ಈ ಕಾರ್ಯಕ್ರಮವನ್ನು 'ಹದ್ನಾರಕ್ಕೆ ಸೇರ್ಸುದು' ಎಂದೂ ಕರೆಯುತ್ತಾರೆ. ಮತ್ತೆ ಕೆಲವರು ಇದನ್ನು 'ಕಾರ್ನೂರಿಗೆ ಇಸುದು' ಎನ್ನುತ್ತಾರೆ.' ಕಾರ್ನೂರು ಎಂದರೆ 'ಕಾರಣವರ್' ಎಂದೇ ಅರ್ಥ. ಗತಿಸಿದ ಹಿರಿಯರನ್ನು ಈ ಪದ ಸಂಕೇತಿಸುತ್ತದೆ. ಈ ಒಟ್ಟು ಚಟುವಟಿಕೆಗಳಲ್ಲಿ ಮೊದಲನೇ ಸಾಲಲ್ಲಿ ಇರುವ 16ಎಲೆಗಳು ಈಗಾಗಲೇ ಗತಿಸಿದ 16ಜನ ಹಿರಿಯರನ್ನು ಸಂಕೇತಿಸಿದರೆ, ಬೇರೆ ಸಾಲಿನಲ್ಲಿರುವ ಎಲೆಯು ಈಗ ಸತ್ತಿರುವ ವ್ಯಕ್ತಿಯನ್ನು ಸಂಕೇತಿಸುತ್ತದೆ. ಆಚರಣೆಯಲ್ಲಿ ಈಗ ಸತ್ತಿರುವವನನ್ನು ಹದಿನಾರು ಹಿರಿಯರೊಂದಿಗೆ ಸೇರಿಸಿ ಬಿಡಲಾಗುತ್ತದೆ. ಆಗ ಒಟ್ಟು ಸಂಖ್ಯೆ ಹದಿನೇಳಾಗುತ್ತದೆ. ತಕ್ಷಣ ಹಿರಿಯರನ್ನು ಸಂಕೇತಿಸುವ ಎಲೆಯೊಂದನ್ನು ಹೊರತೆಗೆದು, ಒಟ್ಟು ಹದಿನಾರು ಎಲೆಗಳನ್ನು ಉಳಿಸಿ, ಕೈ ಮುಗಿಯಲಾಗುತ್ತದೆ. ಅಂದರೆ ಸತ್ತವರಲ್ಲಿ ಒಟ್ಟು ಹದಿನಾರು ಜನರಿಗೆ ಮಾತ್ರ ಇಲ್ಲಿ ಉಳಿಯಲು ಅವಕಾಶ ನೀಡಲಾಗಿದೆ. ಹೀಗೆ ಮನೆಯಲ್ಲಿ ಯಾರಾದರೂ ಸತ್ತರೆ ಪ್ರತಿ ಬಾರಿಯೂ ಹದಿನಾರನ್ನು ಸ್ಥಾಯಿಯಾಗಿ ಇರಿಸಿಕೊಂಡು, ಸತ್ತವನನ್ನು ಹೊಸದಾಗಿ ಸೇರಿಸುತ್ತ, ಹಳಬರಲ್ಲಿ ಒಬ್ಬನನ್ನು ಹೊರಗೆಳೆಯುತ್ತಾ ಇರುತ್ತಾರೆ. ಇದು ಗಂಡುಸರಿಗೂ ಹೆಂಗುಸರಿಗೂ, ಸಮನಾಗಿರುವುದರಿಂದ ಸತ್ತವರ 16ರ ಗುಂಪಿನಲ್ಲಿ ಹೆಂಗಸರೂ, ಗಂಡಸರು ಇರುತ್ತಾರೆಂಬುದ ಸ್ಪಷ್ಟ. ಹೀಗೆ ವ್ಯಕ್ತಿಯು ಸತ್ತ ದಿನದಿಂದ, ಮುಂದಿನ ಹದಿನಾರು ದಿನಗಳವರೆಗೆ ಮನೆಯಲ್ಲಿ 'ಕೋಲೆ'. ರೂಪದಲ್ಲಿದ್ದು, 16ನೇ ದಿವಸದಂದು ಆಗಲೆ ತೀರಿಕೊಂಡ ಹದಿನಾರು ಜನರೊಂದಿಗೆ ಸೇರಿಕೊಂಡು, ಮನೆಯಿಂದ ಅದೃಶ್ಯನಾಗಿ ಬಿಡುತ್ತಾನೆ.

ಹದಿನಾರು ಕೋಲೆಗಳೊಂದಿಗೆ ಸೇರಿಸಲ್ಪಟ್ಟ ಮೃತನು ಮುಂದೆ ಆ ಕುಟುಂಬದಲ್ಲಿ ಹದಿನಾರನೇ ಸಾವು ಸಂಭವಿಸುವವರೆಗೆ ಅಂತ್ಯಕ್ರಿಯೆಗಳಲ್ಲಿ ಭಾಗವಹಿಸುತ್ತಾ, ಮೃತನ ಮನೆಯವರು ನೀಡಿದ ಆಹಾರವನ್ನು ಸ್ವೀಕರಿಸುತ್ತಾ ಇರುತ್ತಾನೆ. ಮನೆಯಲ್ಲಿ ಹದಿನಾರನೇ ಸಾವು ಸಂಭವಿಸಿದ ನಂತರದ ಹದಿನಾರನೇ ದಿವಸಕ್ಕೆ ಆತನ ಅಸ್ತಿತ್ವವನ್ನು ಪೂರ್ತಿ ಅಳಿಸಿ ಹಾಕಲಾಗುತ್ತದೆ. ಮುಂದೆ ಎಂದೂ ಆತ ತನ್ನ ಕುಟುಂಬದೊಂದಿಗೆ ಯಾವ ಬಗೆಯ ಸಾಹಚರ್ಯವನ್ನು ಬೆಳೆಸಿಕೊಳ್ಳುವುದಿಲ್ಲ. ಬದುಕಿರುವವರ ಸಮಸ್ಯೆಯೊಂದು ಇಲ್ಲಿ ನೆಗೆದು ತೋರುತ್ತದೆ. ಅವರ್‍ಯಾರಿಗೂ ಆ ಮನೆಯಲ್ಲಿ ನಡೆಯಬಹುದಾದ ಹದಿನಾರನೇ ಸಾವನ್ನು ತರ್ಕಿಸಲು ಸಾಧ್ಯವಿಲ್ಲ. ಹಾಗಾಗಿ ಮೃತನನ್ನು ಹದಿನಾರು ದಿವಸಗಳಕಾಲ 'ಕೋಲೆ'ಯ ರೂಪದಲ್ಲಿ ಪ್ರತಿನಿಧಿಸಿಕೊಂಡು, ಹದಿನಾರನೆ ದಿವಸದಂದು ಈಗಾಗಲೇ ಸತ್ತವರೊಂದಿಗೆ ಸೇರಿಸಿ ಬಿಟ್ಟು ಕೈತೊಳೆದುಕೊಳ್ಳಲಾಗುತ್ತದೆ.

ಹೀಗೆ 'ಕೋಲೆ'ಯು ಸ್ಥಾಪನೆಯಾಗುವುದು ವ್ಯಕ್ತಿಯ ಸತ್ತಂದಿನಿಂದ ಮತ್ತು ಕೋಲೆಯ ಅಸ್ತಿತ್ವ ಪೂರ್ತಿ ನಿರಸನಗೊಳ್ಳುವುದು ಸತ್ತ ಹದಿನಾರನೇ ದಿನಕ್ಕೆ. ಈ ಹದಿನಾರು ದಿನಗಳನ್ನು 'ಮಧ್ಯಂತರ ಜಗತ್ತು' ಎಂದು ಕರೆಯಬಹುದು. ಇದು ನಿಜವಾಗಲೂ ಇದ್ದ ಮತ್ತು ಪೂರ್ತಿ ಇಲ್ಲವಾಗುವ ಸ್ಥಿತಿಯ ನಡುವಣ ದಿನಗಳು. ನೈಜ ಮತ್ತು ಭ್ರಮೆಯ ಹದವಾದ ಬೆರಕೆಯಲ್ಲಿ ಈ ಭ್ರಾಮಕ ಲೋಕ ನಿರ್ಮಾಣವಾಗುತ್ತದೆ. ಕಾಲ, ವ್ಯಕ್ತಿ ಮತ್ತು ಸ್ಥಳಗಳು ಐಕ್ಯ ಗೊಂಡು ಈ ಮಧ್ಯಂತರ ಜಗತ್ತಿನ ಸೀಮಾರೇಖೆಗಳನ್ನು ಸ್ಥಾಪಿಸುತ್ತವೆ.

*(ಮುಂದಿನ ಸಂಚಿಕೆಯಲ್ಲಿ ಮುಂದುವರಿಯುತ್ತದೆ)*

ಬೇವು ಬಿತ್ತಿ ಮಾವು ಪಡೆಯಲಾಗದು.

## ಒಣ ಜಂಭ

— ಬರಹ : ಗೋವಿಂದಮ್ಮನ ಮೋಹನೇಶ್, ಚಂಗಪ್ಪ

ಒಂದು ಹಳ್ಳಿಯಲ್ಲಿ ಒಬ್ಬ ಮುದುಕಿಯಿದ್ದಳು. ತನ್ನದಾದ ಒಂದು ಚೂರು ಭೂಮಿಯನ್ನು ಮಾರಿ ಬಂದ ಹಣದಿಂದ ನಾಲ್ಕು ಚಿನ್ನದ ಬಳೆಗಳನ್ನು ಮಾಡಿಸಿಕೊಂಡು ಬಹಳ ಸಂತೋಷದಿಂದ ಒಂದೊಂದು ಕೈಗೆ ಎರಡೆರಡನ್ನೂ ಹಾಕಿಕೊಂಡು ರಸ್ತೆಯಲ್ಲಿ ಜಂಭದಿಂದ ಓಡಾಡಿದಳು. ಹಳ್ಳಿಯಲ್ಲಿ ಯಾರೂ ಅವಳ ಬಳೆಗಳನ್ನು ನೋಡದಿದ್ದುದರಿಂದ ಅವಳಿಗೆ ತುಂಬಾ ನಿರಾಶೆಯಾಯಿತು. ತನ್ನ ಬಳೆಗಳ ಕಡೆಗೆ ಜನರ ಗಮನವನ್ನು ಆಕರ್ಷಿಸಲು ಅನೇಕ ಉಪಾಯಗಳನ್ನು ಮಾಡಿದಳು. ಆದರೆ ಯಾವುದೂ ಪ್ರಯೋಜನವಾಗಲಿಲ್ಲ. ಜನರ ಅಸಡ್ಡೆಯಿಂದ ಅವಳಿಗೆ ತುಂಬಾ ಬೇಸರವಾಯಿತು. ರಾತ್ರಿ ನಿದ್ದೆಯೇ ಬರಲಿಲ್ಲ ಕೊನೆಗೆ ಒಂದು ಆಲೋಚನೆ ಹೊಳೆಯಿತು.

ಬೆಳಿಗ್ಗೆ ಎದ್ದು ತನ್ನ ಮನೆಗೆ ತಾನೇ ಬೆಂಕಿ ಹಚ್ಚಿದಳು. ಉರಿ ಮೇಲೆದ್ದಾಗ ಹಳ್ಳಿಯಲ್ಲಿ ಗಲಭೆಯಾಗಿ ಜನರೆಲ್ಲ ಇವಳ ಮನೆಗೆ ಧಾವಿಸಿದರು. ದಡ್ಡ ಹೆಂಗಸು ಮನೆಯ ಮುಂದೆ ಕುಳಿತು, ಕೈಗಳನ್ನು ಕುಲುಕುತ್ತಾ ಪ್ರತಿಯೊಬ್ಬರ ಮುಂದೆಯೂ ಕೈ ಚಾಚಿ, ಬಳೆಗಳನ್ನು ಶಬ್ದ ಮಾಡುತ್ತಿದ್ದಳು " ಅಯ್ಯೋ! ನನ್ನ ಮನೆಗೆ ಬೆಂಕಿ ಬಿತ್ತು. ನನ್ನ ಅದೃಷ್ಟವನ್ನು ಏನೆಂದು ಹೇಳಲಿ ನನ್ನ ಅವಸ್ಥೆಯನ್ನು ದೇವರಾದರೂ ನೋಡಬಾರದೇ?" ಎಂದು ಕೂಗುತ್ತಾ ಕೈಗಳನ್ನು ಜೋರಾಗಿ ಅಲ್ಲಾಡಿಸುತ್ತಿದ್ದಳು. ಕೆಂಪನೆ ಉರಿಯಲ್ಲಿ ಬಳೆಗಳು ಹೊಳೆಯುತ್ತಿದ್ದುವು. ತನ್ನ ಬಳೆಗಳನ್ನು ಜನರಿಗೆ ತೋರಿಸುವ ಸಡಗರದಲ್ಲಿ ಮನೆಯೇ ಹಾಳಾದರೂ ಅವಳಿಗೆ ಪರಿವೆಯಿಲ್ಲ. ಎಲ್ಲರೂ ತನ್ನ ಬಳೆಗಳನ್ನು ನೋಡಿದರಲ್ಲಾ ಎಂದು ಸಂತೋಷವಾಯಿತು ಅವಳಿಗೆ. ಅಂತೆಯೆ ತಮ್ಮ ವಿದ್ವತ್ತನ್ನು ತಾವೇ ಮೆಚ್ಚಿಕೊಳ್ಳುವುದರಲ್ಲಿ ನಿರತರಾದ ವಿದ್ವಾಂಸರು ನಮ್ಮ ಸಮಾಜದಲ್ಲಿರುವುದು ಈ ಮುದುಕಿಯಷ್ಟೇ ಮೂರ್ಖರು ಅಲ್ಲವೆ ?.

---

## ಗಣ್ಯ ವಕ್ತಿಗಳ ನುಡಿ ಮುತ್ತುಗಳು

ಕೇವಲ ಆಡಿಕೊಳ್ಳುವುದರಿಂದ ರಾಮರಾಜ್ಯ ನಿರ್ಮಾಣವಾಗದು. ಸತತ ಪರಿಶ್ರಮ ಹಾಗೂ ದಿಟ್ಟ ಆಡಳಿತದಿಂದ ಮಾತ್ರ ಇದು ಸಾಧ್ಯ.

— ಮಹಾತ್ಮ ಗಾಂಧೀಜಿ.

ರಾಷ್ಟ್ರದ ನಿಜವಾದ ಶಕ್ತಿ ಅದರ ಸಂಖ್ಯಾ ಬಲವಲ್ಲದೆ ಜನತೆಯ ಶಿಸ್ತಿನ ಮಾರ್ಗ.

— ಜವಹರ್‌ಲಾಲ್ ನೆಹರು.

ಪುಸ್ತಕದಲ್ಲಿ ಅಚ್ಚಾಗಿರುವ ವಿಷಯಗಳನ್ನೇ ಮಕ್ಕಳಿಗೆ ಶಿಕ್ಷಕರು ಬೋಧಿಸುವುದಾದರೆ, ಅದು ಶಿಕ್ಷಣ ಎನಿಸಲಾರದು.

— ಸರ್ವೆಪಲ್ಲಿ ರಾಧಾಕೃಷ್ಣನ್.

ಸಾಧನೆಯ ಹಿಂದೆ ಭಗವಂತನ ಅನುಗ್ರಹ ಇದ್ದೇ ಇರುತ್ತದೆ. ಹಾಗೆಂದು ಭಗವಂತನನ್ನು ಮರೆತು ಕೆಲಸಕ್ಕೆ ತೊಡಗಬೇಡ.

— ಭಕ್ತ ಕನಕದಾಸ.

ಒಂದು ಸಮೂಹಕ್ಕೆ ಅಥವಾ ರಾಷ್ಟ್ರಕ್ಕೆ ಸೇರಿದ ಭೂಮಿಯನ್ನು ಅನ್ಯಾಯವಾಗಿ ಆಕ್ರಮಿಸುವವರ ವಿರುದ್ಧ ಹೋರಾಡಿ ಮರಣ ಹೊಂದುವವರಿಗೆ ಪರಲೋಕದಲ್ಲಿ ಪುಣ್ಯವಿದೆ.

— ಮುಹಮ್ಮದ್ ಪೈಗಂಬರ್.

ಮಾತು ಮಾತಿಗೂ ಕುಪಿತನಾಗದಿರು. ತಾಳ್ಮೆ ಸಹನೆಯನ್ನು ಜೀವನದಲ್ಲಿ ಅಳವಡಿಸಿಕೊ.

— ಶ್ರೀ ಸತ್ಯಸಾಯಿ ಬಾಬಾ

ವಿರೋಧಿ ಬಂಧುವೇ ಆಗಿರಲಿ ನ್ಯಾಯದ ಹೋರಾಟದಲ್ಲಿ ಅವೆಲ್ಲವೂ ತೃಣ ಸಮಾನ.

— ಶ್ರೀ ಕೃಷ್ಣ.

ಐಶ್ವರ್ಯ ಹೆಚ್ಚು ಸಮಯ ಮಾನವನಲ್ಲಿ ನಿಲ್ಲುವುದಿಲ್ಲ, ಪ್ರೀತಿ ವಿಶ್ವಾಸ ಸದಾ ಬಾಳುಂಥದ್ದು.

— ಬಸವಣ್ಣ.

ಭಕ್ತಿಯಿರಲಿ ಅದು ಯಾವತ್ತೂ ಸತ್ಯದ ತಳಹದಿಯ ಮೇಲಿರಲಿ.

— ಗೌತಮ ಬುದ್ಧ.

ಉತ್ತಮ ಕೆಲಸ ಮಾಡಲು ವ್ಯಯಿಸಿದ ಒಂದು ಗಂಟೆ ಸಮಯವು ನೂರು ಗಂಟೆ ಮಾಡಿದ ಪ್ರಾರ್ಥನೆಗಿಂತ ಮಿಗಿಲು.

— ಸ್ವಾಮಿ ವಿವೇಕಾನಂದ.

ಸಂಗ್ರಹ : ಸಬ್ಬಂಡ್ರ ಶರತ್ ಕಮಾರ್ (ಸುಧಿ,)
ಮಕ್ಕಂದೂರು

---

### ನಗೆ ಹನಿ – ಹೆಣ್ಣೋ? ಗಂಡೋ?

ಈ ಕಾಲ್ದಲ್ಲಿ ಹೆಣ್ಯಾರು ಗಂಡ್ಯಾರೆಂದು ಗುರ್ತಿಸೋದೆ ಕಷ್ಟ
ಅದೋ ಆ ಹುಡಗನ್ನ ನೋಡಿ ಒಳ್ಳೆ ಹುಡ್ಗೀ ತರ ಕಾಣ್ತಿದ್ದಾನೆ
"ಅದು ನನ್ನ ಮಗಳು ಸ್ವಾಮಿ"
"ಹೌದು ! ನೀವು ಅವಳ ತಂದೆನಾ"?
ನೋ........ ನಾನು ಅವಳ ತಾಯಿ

— ಪಿ. ಎಸ್. ಹಂಸಿ, ಮದೆನಾಡು

---

ಪುಷ್ಪ ಡೊಂಕಾದರೇನು, ಪರಿಮಳ ಡೊಂಕೇ ?

# ವಾಂಟೆಡ್ ಮಿಸ್ಟರ್ ರಾಜು : [ನಮ್ಮ ರಾಜು ಮಂಜ ಕಥೆ]

ಲೇಖನ : ಶಂಕರನ ಬಸಪ್ಪ

ಧಾರಾವಾಯಿ - 32

ಮೈಸೂರುಲಿ ಕೊಡಗ್‌ಲಿ, ಬೇರೆ ಊರುಗಳಲ್ಲಿ ಕೂಡಾ ಇಂದ್‌ನ ಆಂದೋಲನ ದಿನ ಪತ್ರಿಕೆಲಿ ತನ್ನ ಪೋಟೋ ಸಮೇತ ಪ್ರಿಂಟಾಗಿದ್ದುದರ Mr.ರಾಜು ನೋಡಿ ಗಾಭರಿ ಬಿದ್ದು ಹೋತ್. ಇನ್ನ್ ಮುಂದಕೆ ನನ್ನ ಆಟ ನಡಿಯುದಿಲ್ಲೆ ಈಗಾಗ್ಲೇ ನನ್ನ ಹುಡುಕಿ ಹಿಡಿಯಕೆ, ಬಹಳ ಜನ ಹಿಂದೆ ಬಿದ್ದೊಳೊ. ಆ ಎಲ್ಲವೂ ನನ್ನ ತಂಗೆನ ಮದ್ವೆ ಫಂಕ್ಷನ್‌ಗೆ ಖಂಡಿತ ಬಂದು ಬುಡುವೋ ಯಾಕೆತ್ತೇಳಿರೆ ಅಣ್ಣನಾದ ನಾನ್ ತಂಗೆನ ಮದುವೆ ಮೂಹೂರ್ತದ ಸಮಯಕ್ಕಾದ್ರೂ ಹಾಜರಾಗೇ ಆದ್ನೇತ್ತೇಳುವ ಗ್ಯಾರೆಂಟಿ ಈಗ ಇವುಕೆಲ್ಲಾ ಉಟ್ಟು. ಆದ್ರಂದ ಈ ಕೊನೇ ಘಳಿಗೆಲಿ ನಾನ್ ಸ್ವಲ್ಪ ಏಮಾರ್ದುನೂ ಬಹಳ ಕಷ್ಟ ಆಗಿ ಹೋದೆ. ಈಗ ಇವುಕೆ ಯಾರಿಗೂ ನನ್ನ ಗುರ್ತೆ ಸಿಕ್ಕದಂತಹ ಒಂದ್ ಫೈನಲ್ ವೇಷನ ಈಗ ಹಾಕಂಬೋಕು ತಾ ಗ್ಯಾನ ಮಾಡಿಕಂಡೇ ನಡಿತಿತ್. ಹಂಗೇ ಕ್ಲಾಕ್ ಟವರ್ ಹತ್ರ ಪುಟ್‌ಪಾತ್ ಮೇಲೆ ನಡಿತ್ತಿತ್ತ್.

ಕ್ಲಾಕ್ ಟವರ್ ದೊಡ್ಡ ಗಡಿಯಾರ ಕಂಬ. ಇದರ್ನ ಮೈಸೂರು ಮಹರಾಜ ಶ್ರೀ ಜಯಚಾಮರಾಜೇಂದ್ರ ಒಡೆಯರ ಕಾಲಲೇ ಬಹಳ ಕಲಾ ನಿಪುಣತೆಂದ ಒಂದ್ ಎತ್ತರದ ಕಂಬನ ಚೌಕಾಕಾರನ ಆಗಿ ಕಟ್ಟಿಸಿ ಅದರ ಮೇಲೆ ಒಂದ್ ಬೃಹದಾಕಾರದ ನಾಲ್ಕು ಬದಿಲಿ ಸಮಯ ಎಷ್ಟ್ ಆಗುತಿದ್ದದೆ ಕಾಂಬುವಂಗೇ ಒಂದೊಂದು ಗಾಡಿ ಚಕ್ರಕ್ಕಿಂತಲೂ ಅಗಲದ ಡಯಾಲ್‌ಗಳ ಹಾಕಿಸಿ ಅದರ್ಲಿ ದೊಡ್ಡದೊಡ್ಡ ಗಂಟೆಗಳ ಅಕ್ಷರಗಳ ಬರೆಸಿ ತುಂಬಾ ದೂರಕ್ಕೂ ಕಾಣುವಂತಹ ಗಂಟೆಮುಳ್ಳುಗಳ್ನ ಅಳವಡಿ ಸೊಳೊ. ಈ ಟವರ್‌ಲಿ ಘಂಟೆ ಹೊಡೆಯಕಾಕನ ಅದರ ಸೌಂಡ್ ಇರಳ್‌ನ ಸಮಯ ಆದ್ರೇ ಹೆಚ್ಚ್‌ಕಮ್ಮಿ ಮೂರು ಕಿ. ಮೀ. ದೂರದವರೆಗೂ ಕೇಳಿಸಿದೆ. ಈ ತರದ ಗಡಿಯಾರ ಕಂಬ ಇಡಿ ಇಂಡಿಯಾಲೇ ಬಹಳ ಪ್ರಖ್ಯಾತಿ. ಇದ್ ಅರಮನೆಗೆ ಮುಖ್ಯವಾದ ಸಂಪರ್ಕಗೇಟ್‌ಗೆ ಸೇರಿದ ರಸ್ತೆ ಆದ್ರೂನೂ ಕೂಡಾ ಈಗಿನ ಬಸ್ಸ್ ಕಾರ್‌ಗಳ ಓಡಾಟನ ತಡಿಯಕೆ ಬೊತ್ತದೆ ಸ್ವಲ್ಪ ಒನ್ ವೇ ಸಂಚಾರ ಮಾಡಿ ಈ ರಸ್ತೆನ ಸ್ವಲ್ಪ ಶಾಂತರೀತಿಗೆ ಮಾರ್ಪಾಡು ಮಾಡ್ಯೊಳೊ. ಅದ್ರಂದ ಇಲ್ಲಿ ಟೌನ್‌ಹಾಲಿಗೆ ಸೇರ್ವಂಗೆ ಇದ್ದ ಪುಟ್‌ಪಾತ್‌ನ ಈ ಜಾಗದ ಉದ್ದಕೂ ನಮ್ಮ ಟಿಬೇಟ್ ಜನರ ಬಟ್ಟೆ ವ್ಯಾಪಾರದ ಕೇಂದ್ರ ಆಗಿಹೋಗುಟ್ಟು. ಅಲ್ಲಿ ನಾನಾ ತರದ ಹಲವಾರು ಬಣ್ಣಗಳ ಉಲ್ಲನ್ ಡ್ರೆಸ್‌ಗ. ಸ್ವೆಟರ್ಸ್‌ಗ, ಬನಿಯನ್ಸ್‌ಗ, ಡಿಸೈನ್ ಡಿಸೈನ್‌ಗಳ ಕಂಬ್ಳಿ ಬೆಡ್‌ಷೀಟ್‌ಗಳ ಕಣ್ಣಿಗೆ ಒಳ್ಳೆ ಲಾಯಕ್‌ಲಿ ಕಾಂಬುವಂಗೆ ಕಾಂಪೌಂಡ್ ಗೋಡೆಗಳ ಮೇಲೆ ನೀಟಾಗಿ ಜೋಡಿಸಿದ್ದೊ. ಇವರ ಇಂಪೋರ್ಟೆಡ್ ಪ್ಯಾಂಟ್‌ಗ, ಶರ್ಟ್‌ಗ, ಹೆಣ್ಣ್‌ಮಕ್ಕಳ ಚೂಡಿದಾರ್‌ಗ, ಮಿಡ್ಡಿಗ ಎಲ್ಲಾ ಕಣ್ಣ್ ಕುಕ್ಕುವಂಗೆ ಹೊಸಹೊಸ ಡಿಸೈನ್ ಬಟ್ಟೆಗಳ ವ್ಯಾಪಾರ ವ್ಯವಹಾರ ಬಹಳ ಬಿರುಸಾಗಿ ಅಲ್ಲಿ ನಡಿಯುತಿತ್ತ್. ಅಲ್ಲಿ ಈ ವ್ಯಾಪಾರ ವ್ಯವಹಾರಗಳ ಅಂಗಡಿ ಮಾಲೀಕರ್‌ಗ ನಮ್ಮ ಬೈಲ್‌ಕುಪ್ಪೆ ಟಿಬೇಟ್ ಕಾಲೋನಿಯ ಜನನೇ ಎಲ್ಲಾ. ಇವರ್ಲಿ ಹೆಣ್ಣ್ ಜನ, ಗಂಡ್‌ಜನತ್ತೇಳುವ ಭೇದ ಭಾವ ಇಲ್ಲೆ. ಎಲ್ಲವೂ ಈ ವಿಶೇಷತರದ ಬಟ್ಟೆವ್ಯಾಪಾರಲಿ ತುಂಬಾ ಕುಶಾಲಿಗ. ಇವರನೆಲ್ಲಾ Mr.ರಾಜು ಒಂದ್ ಸರ್ತಿ ಬಹಳ ಖುಷೀಲಿ ನೋಡುತಾ ಹೋಕ್ಕಾಕನ ಅಲ್ಲಿ ಇಂವಂಗೆ ಮಡಿಕೇರಿ ಕಾಲೇಜ್‌ಲಿ ಓದ್‌ತಿರ್‌ಕನ ಇವನ ಜೊತೆಲಿ ಕರಾಟೆ ಕಲಿಯಕೆ ಒಟ್ಟಿಗಿದ್ದ Mr. ಮಹೇಂದ್ರಪಾಲ್‌ನ ಕಂಡತ್. ಅಂವನೂ ಅಲ್ಲಿ ಬಂದಿದ್ದ ಗಿರಾಕಿಗಳೊಟ್ಟಿಗೆ Imported Quality ಬಟ್ಟೆನ ವ್ಯಾಪಾರ ಮಾಡ್‌ತಿತ್. Mr. ರಾಜು ಓಡಿಹೋಗಿ ಅಂವನ ಕೈ ಹಿಡ್ದ್ ಶೇಖ್‌ಹ್ಯಾಂಡ್ ಮಾಡಿ ನಗೆ ಆಡ್ತ್. ಆಗ ಮಹೇಂದ್ರಪಾಲ್‌ಗೆ ಈ ಸ್ನೇಹಿತ Mr. ರಾಜುನ ಒಮ್ಮೆಗೆ ಇಲ್ಲಿ ಕಂಡ್ ಆಶ್ಚರ್ಯ ಆಗಿ ಹೋತ್. ಅವನೂ ಬಹಳ ಖುಷಿ ಪಟ್ಟಕಂಡ್ Mr. ರಾಜು ನೀನ್ ಇಲ್ಲಿ ನನ್ನ ಮೀಟ್ ಆದ್ ತುಂಬಾ ಆಶ್ಚರ್ಯ ಮತ್ತೆ ಸಂತೋಷನೂ ಕೂಡಾ ಆತ್. ಒಂದ್ನಿಮಿಷ ತಡಕ ಈ ಗಿರಾಕಿಗಳ ವ್ಯಾಪಾರ ಆಗಿ ಹೋಗ್ಲಿ ತಾ ಹೇಳಿ Mr. ಮಹೇಂದ್ರ ಪಾಲ್ ಬಂದಿದ್ದ ಗಿರಾಕಿಗಳಿಗೆ ಪ್ಯಾಂಟ್ ಶರ್ಟ್‌ಗಳ ಕೊಟ್ಟ್ ವ್ಯಾಪಾರನ ಮುಗ್ಗಿ ಕಳ್ಸಿತ್. ಆಮೇಲೆ ಹಾಂ ಮಿ. ರಾಜು ನೀನ್ ಬಂದದ್ ನಂಗೆ ಬಹಳ ಖುಷಿ ಆಗಿಹೋತ್. ಏನ್ ಸಮಾಚಾರ ಮನೆಲಿ ಬಾಪ್, ಅಮ್ಮ ಮತ್ತೆ ಬೆಹನ್ ಜೀ ಎಲ್ಲಾ ಆರಾಂ ತಾನೇ ತಾ ಹೇಳ್ತ್. ಬುಟ್ಟು ಬಂದ್ ಒಂದ್ ತಿಂಗ್ಲ ಹತ್ರನೇ ಆಗಿ ಹೋತ್. ಇಲ್ಲೇ ಉಮಾ ಟಾಕೀಸ್ ಹತ್ರದ ಜೈನ್ ಲಾಡ್ಜ್‌ಲಿ ಒಳೆ. ಆದ್ರೇ ನೀನೇ ಇಲ್ಲಿ ವ್ಯಾಪಾರ ಮಾಡ್ತಾ ಇರ್ವ ವಿಷ್ಯ ನಂಗೆ ಗೊತ್ತಿತ್‌ಲ್ಲೆ. ಸರಿ ಈಗ ನನ್ನ ಆಪತ್ ಕಾಲಲಿ ನೀನ್ ನಂಗೆ ಸಿಕ್ಕಿದ್ ಬಹಳ ಒಳ್ಳೆದಾತ್. ಇಲ್ಲಿ ವ್ಯಾಪಾರನ ನಿನ್ನ ತಮ್ಮಂಗೆ ಒಪ್ಪಿಸಿ ನನ್ನ ರೂಂಗೆ ನನ್ನೊಟ್ಟಿಗೆ ಸ್ವಲ್ಪ ನೀನ್ ಬರೋಕು. ಒಂದ್ ವಿಶ್ಯನ ನಿನ್ನ ಹತ್ರ ಬಹಳ ತುರ್ತಾಗಿ ಮಾತಾಡಿಕೆ ಉಟ್ಟು ತಾ ಹೇಳ್ತ್.

ಹಿಂದಿನ ಸಂಚಿಕೆಲಿ......

:ಗಿರ್ವಿ ಅಂಗಡಿ ಸೇಟ್‌ನ ಹತ್ರ ಬೆಳ್ಳಿಂದ ಮಾಡ್ಸಿದ ಒಡವೆಗಳ ಮಡ್‌ಗಿ ಅದಕ್ಕೆ ಚಿನ್ನದ ಬೆಲೆಯ ಹಣನ ತಕಂಡತ್. ಇನ್ನ್ ಹಿಂಗೇ ಬ್ರಷ್ಟಾಚಾರ್ ಮಾಡ್ತ ಜನರ ಹತ್ರ ನೆಟ್ಟಿಗೆ ನಿಷ್ಠುರ ಮಾಡಿಕಂಬಕಾಗಿದ್‌ತ ಗೇನ ಮಾಡಿಕಂಡತ್. ಅದ್ರಂದ ಮಾರನೆ ದಿನ ಆರಾಂ ಆಗಿ ಪಿಚ್ಚರ್ ನೋಡಿಕಂಡ್ ಸಂಜೆ ಹೊತ್ತ್‌ಲಿ ಹೊಟೇಲ್ ಗೋವರ್ಧನಲಿ ಕಾಫಿ ಕುಡಿಯಕ್ಕೆ ಹೋದಲ್ಲಿ ಇಂವನ ಪೋಟೋ ಸಮೇತ ಪೇಪರ್‌ಲಿ ಹಾಕಿ ಜನ ಹುಡುಕುತಾ ಒಳೋತಾ ಗೊತ್ತಾದೆ......

ಮುಂದಕೆ ........

ಕಾಡ್ ಕೋಳಿಗೆ ಉಟ್ಟ್ ಸಂಕ್ರಾಂತಿ.

ಹೋ ಆಗಲಿ ರಾಜು ದೋಸ್ತ್ ನಾನ್ ಈಗಳೇ ನಿನ್ನೊಟ್ಟಿಗೆ ಬನ್ನೆತಾ ಹೇಳಿ. ತಮ್ಮ ದೀರೇಂದ್ರಪಾಲ್‌ಗೆ ಈ ವ್ಯಾಪಾರನ ನೋಡಿಕೆ ಹೇಳಿ ರಾಜುನ ಒಟ್ಟಿಗೆ ಹೊರಟತ್.

ಜೈನ್ ಲಾಡ್ಜ್ ರೂಂನ ಒಳಗೆ ಈ ಇಬ್ಬರೂ ಸ್ನೇಹಿತರ್ ಕುದ್ದ್‌ಕಂಡೊ. ಆಗ Mr. ರಾಜು ತನ್ನ ಜೋಬೊಳಗಿಂದ ಅಂದ್‌ನ ಆಂದೋಲನ ದಿನ ಪತ್ರಿಕೆನ ಹೊರಗೆ ತೆಗ್ದ್ ಅದರ್ಲಿ ತನ್ನ ಪೋಟೋ ಪ್ರಿಂಟ್ ಆಗಿದ್ದರ ತೋರ್ಸಿ ಕಂಡ್ ಹೇಳ್ತ್ ಮಹೇಂದ್ರ ಪಾಲ್. ನೋಡಿಲ್ಲಿ ನನ್ನ ಪೋಟೋ ಈ ಪೇಪರ್‌ಲಿ ನನ್ನ ಪಪ್ಪ ಹಾಕಿಸಿದ್. ನಾನ್ ಮನೆಂದ ಯಾರಿಗೂ ಹೇಳದೆ ಇಲ್ಲಿಗೆ ಓಡಿ ಬಂದ್ ಬುಟ್ನೋಳೆ. ಅಲ್ಲದೆ ಬಂದಮೇಲೆ ನಾನ್ ನನ್ನ ಅಡ್ರಸ್‌ನ ನನ್ನ ಮನೆಯವುಕೆ ತಿಳಿಸಿತಿಲ್ಲೆ. ಈಗ ನನ್ನ ತಂಗೆನ ಮೊದ್ವೆ ನಾಡ್‌ದ್ ತಾರೀಕ್ 25ನೇ ಬುದುವಾರ ನಡದದೆ. ಹಂಗಾಗಿ ನಾನ್ ನನ್ನ ತಂಗೆನ ಮದ್ವೆಗೋಸ್ಕರ ನಾನ್ ಹೆಂಗಿದ್ದರೂ ಈ ಪೇಪರ್‌ಲಿದ್ದ್‌ದನ ನೋಡಿ ಮನೆಗೆ ಬರ್ಲಿತ್ತೇಳಿ ನನ್ನ ಪಪ್ಪ ಈ ಪಬ್ಲಿಸಿಟಿನ ಕೊಟ್ನೊಳೊ. ಆದ್ರೇ ಈ ಪೇಪರ್‌ಲಿ ನನ್ನ ಪೋಟೋ ಬಂದ ಮೇಲೆ ಈಗ ನಾನ್ ನನ್ನ ಮುಖನ ಹೊರಗೆ ತೋರ್ಸಿಕೆ ಸಾಧ್ಯನೇ ಆದ್‌ಲ್ಲೆ. ಯಾಕೆತ್ತೇಳಿರೆ, ಈಗ ನಾನ್ ಅರ್ಜೆಂಟಾಗಿ ತುಂಬಾ ಜನಿಕೆ ಬೇಕಾಗೊಳೆ.

ಮುಖ್ಯವಾಗಿ ಬ್ರಷ್ಟಚಾರ ಮಾಡ್ವ ಗೂಂಡಾಗಳಿಗೆ, ಮೋಸಮಾಡುವ ಕಳ್ಳರಿಗೆ ದರೋಡೆಕೋರರಿಗೆ, ಪೋಲಿಸ್‌ನವುಕೆ, ಹಂಗಾಗಿ ಈಗ ಈ ಜನ ಎಲ್ಲಾ ನನ್ನ ಹಿಡಿಯಕೆ ಹುಡುಕುತಾ ಒಳೊ. ಅಲ್ಲದೆ ಈಗ ನನ್ನ ಮುಖ ನೋಡ್ವ ಇಲ್ಲಿನ ಜನ ನನ್ನ ಹಿಡ್ದ್ ನಮ್ಮ ಪಪ್ಪಂಗೆ ಒಪ್ಪಿಸಿರೆ ಅವುಕೆ ಕೂಡಾ ನನ್ನ ಪಪ್ಪ ಬಹುಮಾನ ಕೊಟ್ಟವೆಗಡ.

ನಾನ್ ನನ್ನ ತಂಗೆನ ಮದ್ವೆ ಮಾಡಿಕೆ ಅರ್ಜೆಂಟಾಗಿ ಬೇಕಾಗಿದ್ದ ಒಂದ್ ಲಕ್ಷ ರೂಪಾಯಿ ವರದಕ್ಷಿಣೆ ಹಣಕ್ಕೋಸ್ಕರ ಕೆಲವಾರು ಸಮಾಜ ದ್ರೋಹಿಗಳ, ಕೇಡಿಗಳ ಬ್ರಷ್ಟಾಚಾರಿಗಳ ಎದುರಿಸಿ ಅವರ ಸೋಲಿಸಿ ಅವಿಕೆಲ್ಲಾ ಮುಖಬಂಗ ಮಾಡಿ ಅವರಿಂದ ಸ್ವಲ್ಪ ಸ್ವಲ್ಪ ಹಣನ ವಸೂಲಿ ಮಾಡ್ನೊಳೆ. ಈ ಪೇಪರ್‌ಲಿ ನನ್ನ ಪೋಟೋ ಅಲ್ಲದೆ ನನ್ನ ತಂಗೆ ಮದ್ವೆ ನಡಿಯುವ ದಿನನ ಮತ್ತೆ ನನ್ನ ಮನೆ ಅಡ್ರಸ್‌ನ ಕೂಡಾ ವಿವರವಾಗಿ ಕೊಟ್ಟು ಬುಟ್ನೊಳೊ. ಹಂಗಾಗಿ ನನ್ನಿಂದ ಅವಮಾನಿತ ಈ ಕೇಡಿಗ ಎಲ್ಲಾ ಒಟ್ಟಿಗೆ ಸೇರಿಕಂಡ್ ನೆಟ್ಟಂಗೆ ನನ್ನ ಮನೆಗೆ ನನ್ನ ತಂಗೆನ ಮದ್ವೆ ದಿನ ಬಂದ್ ಬುಟ್ಟವೆ. ಅಲ್ಲಿ ನನ್ನ ಹಿಡ್ಕಂಡ್ ನನ್ನ ತಿಥಿ ಮಾಡಿ ಬುಟ್ಟವೆ. ಈಗ ಇದ್‌ಕೆ ಏನಾದರೊಂದ್ ಉಪಾಯ ಕಂಡು ಹಿಡಿಯಕು ಮಹೇಂದ್ರು. ನೀನೇ ಈಗ ಉಪಾಯ ಏನಾದ್ರೂ ಇದ್ರೆ ನೀನೇ ತಿಳ್ಸೋಕು. ಈಗ ನೀನೇ ನಂಗೆ ಸರಿಯಾದ ದಾರಿ ತೋರ್ಸುವ ಸ್ನೇಹಿತ ತಾ ಕೇಳಿಕಂಡತ್. ಆಗ Mr. ಮಹೇಂದ್ರ ಪಾಲ್ Mr.ರಾಜುನ ಹತ್ರ ಗುಟ್ಟಾಗಿ ಅದೇನೇನೋ ಬಹಳ ಹೊತ್ ಮಾತಾಡಿಕಂಡತ್. ನೀನ್ ಈ ವಿಚಾರಲಿ ಏನೂ ಗಾಭರಿ ಪಡ್ದು ಬೇಡ. ನಿನ್ನ ತಂಗೆ ಶೋಭನ ಮದ್ವೆನ ಮತ್ತೆ ನಿನ್ನ ಮದ್ವೆನ ಕೂಡಾ ನಾನ್ ನಿಂತ್‌ಕಂಡ್ ನಡ್ಸಿಕೊಟ್ಟನೆ. ನಿಂಗೆ ನಿನ್ನ ಒಂದ್ ರೋಮ ಕೂಡಾ ಅಲ್ಲಾಡದಂಗೆ, ತೊಂದರೆ ಆಗದಂಗೆ ನಾನ್ ನಿಂತ್‌ಕಂಡ್ ವ್ಯವಸ್ತೆ ಮಾಡಿನೆ. ನನ್ನ ಪ್ರಾಣ ಸ್ನೇಹಿತನಾದ ನಿನ್ನ ಮದ್ವೆನ ಕೂಡಾ ನಾನೇ ಮುಂದೆ ನಿಂತ್ ನೆರವೇರಿಸಿ ಕೊಟ್ಟನೆ. ನೀನ್ ಯಾವುದಕ್ಕೂ ಹೆದ್ರಿಕಂಬೋದು ಬೇಡತ್ತೇಳಿ, ಧೈರ್ಯ ಹೇಳ್ತ್.

ಆಮೇಲೆ Mr. ರಾಜು, ಮಹೇಂದ್ರಪಾಲ್‌ಗೆ ಕೇಳಿಕಂಡತ್. ಎನ್ತ್ತೇಳಿರೆ ನೀನ್ ಈಗಿಂದೀಗ್ಲೆ ನನ್ನ ಬದ್ಲ್ ನೀನ್ ನನ್ನ ಮನೆಗೆ ಹೋಕು. ಆಮೇಲೆ ಅಲ್ಲಿ ನೀನ್ ಯಾವ ಯಾವತರ ಯಾವ್ವವ ಕೆಲಸ ಕಾರ್‍ಯಗಳನ ಹೆಂಗೆಂಗೆ ಮಾಡೋಕು ತಾ ವಿವರವಾಗಿ ಹೇಳಿಕೊಡ್ತ್. ಅದ್‌ಕೆಲ್ಲಾ Mr. ಮಹೇಂದ್ರಪಾಲ್ ಖುಷಿಲೇ ಒಪ್ಪಿಕಂಡತ್.

" ಹೈ ರಾಜು ಬೈಯ್ಯ ನಾನೂ ನೀನೂ ಕಾವೇರಿ ಕಾಲೇಜ್‌ಲಿ ಒಟ್ಟಿಗೆ ಕಲ್ತಿರುವ ಕರಾಟೆ, ಜುಡೊ ವಿದ್ಯನ ಸಂದರ್ಭ ಬಂದರೆ ಈ ಸಮಯಲಿ ಅದರ ಉಪಯೋಗಿಸಿಕಂಬಕೆ ನೀನ್ ಪರ್ಮಿಶನ್ ಕೊಡ್" ಯಾಕೆತ್ತೇಳಿರೆ ಏನಾದ್ರೂ ನೋವು ನಷ್ಟವಾಗುವಂತ ಅಥವಾ ತೊಂದ್ರೆ ಆಗುವಂತಹ ಆಪತ್ ಬಂದ್ ಬುಟ್ರೇ ಆಗ ನಾನ್ ಕಲ್ತಂತಹ ವಿದ್ಯೆನೆ ಪ್ರದರ್ಶನ ಮಾಡಿಕ್ಯಾದೆ. ಅಷ್ಟಕೆ ಮಾತ್ರ ನೀನ್ ಪರ್ಮಿಶನ್ ಕೊಡು ಮುಂದಿನ ಎಲ್ಲಾ ಜವಾಬ್ದಾರಿ ನನ್ನ ಮೇಲೆ ಇರ್ಲಿ. ನೀನ್ ಏನೂ ತಲೆ ಕೆಡ್ಸಿಕಂಬೊಂತಹ ಸಂದರ್ಭ ಬಾರದಂಗೆ ನಾನ್ ನೋಡಿಕಂಡನೆ ತಾ Mr. ರಾಜುಗೆ ಧೈರ್ಯ ಕೊಟ್ಟತ್. ಆಗ Mr. ರಾಜು. ಮನಸ್ಸ್ ಇಲ್ಲದ ಮನ್ಸ್‌ಂದ ಅನಿವಾರ್ಯವಾಗಿ ಒಂದ್ ವೇಳೆ ನಂಗಾಗಲೀ ನನ್ನ ತಂಗೆಗಾಗಲೀ ಪ್ರಾಣಪಾಯ ಅಥವಾ ತೊಂದ್ರೆ ಬರುವಂತಹ ಸಂದರ್ಭ ಬಂದ್ ಬುಟ್ರೆ ಮಾತ್ರ ನೀನ್ ನಿನ್ನ ಶಕ್ತಿನ ಉಪಯೋಗಿಸಿಕಂಬಕೆ ಅನುಮತಿ ಕೊಟ್ಟನೆ. ಅನಿವಾರ್ಯ ಆದ್ರೇ ನಾನ್ ಕೂಡಾ ನಿನ್ನ ಜೊತೆಗೆ ಸೇರಿಕಂಡನೆ. ಆದ್ರೇ ಅಂತಹ ಪರಿಸ್ತಿತಿ ಬರದೇ ಇರ್ಲಿ ತಾ ನಾನ್ ನಿನ್ನ ಹತ್ರನೂ ನನ್ನ ಗುರು ಕಾರಣವನ ಹತ್ರನೂ ಕೇಳಿಕಂಡನೆ ತಾ ಆಶ್ವಾಸನೆ ಕೊಡ್ತ್. ಯಾಕೆತ್ತೇಳಿರೆ ಈ ಇಬ್ಬರು ಸ್ನೇಹಿತರ್‌ಗ ಇವು ಕಲ್ತಿದ್ದ ಮಾರ್ಶಲ್ ಆರ್ಟ್‌ನ ಪ್ರಯೋಗದ ಡೆಮಾನ್ ಸ್ಟ್ರೇಟ್ ಮಾಡಿಕೆ ಹೋದ್ರೆ ಇವರ ಎದುರಿಗೆ 50 ಜನ ಒಟ್ಟಿಗೆ ಬಂದ್ ಮೇಲೆ ಬಿದ್ದರೂ ಇವರ ಸೋಲಿಕೆ ಸಾಧ್ಯ ಆದುಲ್ಲೆ. ಆದ್ರಂದ ತಂಗೆ ಶೋಭನ ಮದ್ವೆ ಜಂಬಾರ ಯಾವುದೇ ಜಗಳ ಹೊಡ್ದಾಟದ ಗಲಾಟೆಗ ಇಲ್ಲದೆ ಸಿಟ್ಟ್‌ಲಿ ಹೊಡಿಯಕೇತ್ತೇಳಿ ಬಂದವರ ಜೊತೆ ಗಲಾಟೆ ಮಾಡದೆ ಅವುಕೆಲ್ಲಾ ಸಮಾಧಾನಲಿ, ಪ್ರೀತಿಲಿ, ನಿಭಾಯಿಸಿ ಯಾವುದೇ ತಾಪತ್ರೆಗ ಆಗದಂಗೆ ನೋಡಿಕಂಡ್ ಈ ಮದ್ವೆ ಜಂಬಾರನ ನಡೆಸಿ ಕೊಡುವ ಜವಾಬ್ದಾರಿನ Mr. ರಾಜು ತನ್ನ ಪ್ರಾಣಸ್ನೇಹಿತ Mr. ಮಹೇಂದ್ರಪಾಲ್‌ಗೆ ವಹಿಸಿ ಕೊಟ್ಟತ್. ನಾನ್ ನನ್ನ ತಂಗೆನ ಮದ್ವೆಗೋಸ್ಕರ ತೆಗ್ದ್ ಮಡಗಿದ್ದ ಬಟ್ಟೆ ಬರೆ ಚಿನ್ನಾಭರಣ ಸಾಮಾನುಗಳ್ನ ಇನ್ನೂ ಪಪ್ಪ ಅಮ್ಮಗೆ ಇರುವ ಬಟ್ಟೆ ಬರೆ ಸಾಮಾನುಗನೆಲ್ಲಾ ನಾಳೆ ದಿನ ಕೊಟ್ಟನೆ. ಖರ್ಚಿಗೆ ಬೇಕಾದಷ್ಟು ಕೊಟ್ಟನೆ. ನೀನ್ ನಾಳೆ ಸಾಯಂಕಾಲದ ಒಳಗೆ ನನ್ನ ಮನೆ ಸೇರೋಕು. ಅಲ್ಲಿ ಹೋದಮೇಲೆ ಎಲ್ಲಾ ಪರಿಸ್ತಿತಿ ನಿಂಗೇ ಗೊತ್ತಾದೆ. ನೀನ್ ಮಾತ್ರ ನನ್ನ ಪೊಪ್ಪ ಅಮ್ಮಂಗೆ ತಂಗೆಗೆ

ಹಾವು ಸಣ್ಣದಾದರು ವಿಷ ಕಮ್ಮಿ ಇರ್ದುಲೆ.

20 ನೇ ಪುಟಕ್ಕೆ

# ಪತ್ರ ವಿಭಾಗ



## ಮರ್ಯಾದೆ ಉಳಿಸಿ

ಮಾನ್ಯರೇ,

ಸಂಪುಟ 5 ಸಂಚಿಕೆ 7ರ ಪತ್ರ ವಿಭಾಗದಲ್ಲಿ ಕುದುಕುಳಿ ಶ್ರೀ ಸುಬ್ಬಯ್ಯನವರು "ಮರ್ಯಾದೆ ಉಳಿಸಿ" ಎಂಬ ಅಂಕಣದಲ್ಲಿ ಬರೆದಿರುವ ವಿಷಯದ ಬಗ್ಗೆ ನನ್ನ ಅನಿಸಿಕೆಗಳನ್ನು ತಿಳಿಸಲು ಇಚ್ಛಿಸುತ್ತೇನೆ. ನಮ್ಮ ಭಾಷೆ ಅರೆಭಾಷೆ ಎಂದರೆ ಅರೆಕನ್ನಡ ಅಥವಾ ಹಳೆಗನ್ನಡ ಎಂದು. ಅರೆ ಭಾಷೆ ಎಂದರೆ ಅರ್ಧ ಭಾಷೆ ಎಂದರ್ಥ. ಉದಾ: ಬರುತ್ತೇನೆ -ಬನ್ನೆ, ಹೋಗುತ್ತೇನೆ. ಹೋನೆ. ಇದರಲ್ಲಿ ಎರಡಕ್ಷರಗಳು ಲೋಪವಾಗಿ ಇನ್ನೆರಡಕ್ಷರಗಳು ಬಳಕೆಯಾಗಿವೆ. ಇದು ಅರ್ಧಕನ್ನಡ ಅಂದರೆ ಅರೆಕನ್ನಡವೇ ಹೊರತು ಅರೆಭಾಷೆಯಲ್ಲ. ಅರೆಭಾಷೆಯೆಂದು ಪ್ರಚಾರದಲ್ಲಿದೆಯಷ್ಟೆ. ಶ್ರೀ ಸುಬ್ಬಯ್ಯನವರು ತಿಳಿಸಿದಂತೆ ಇದು ಅನೇಕ ಭಾಷೆಗಳಲ್ಲಿ ಇದ್ದೇ ಇದೆ. ಹವ್ಯಕ ಬ್ರಾಹ್ಮಣರು ಕೂಡ ಅರೆಭಾಷೆ ಮಾತನಾಡುತ್ತಾರೆ. ನಾವು ಮಾತನಾಡುವುದಕ್ಕೂ ಅವರು ಮಾತನಾಡುವುದಕ್ಕೂ ಉಚ್ಚಾರಣೆಯಲ್ಲಿ ಸ್ವಲ್ಪ ವ್ಯತ್ಯಾಸವಿರುವುದೇ ಹೊರತು ಮಿಕ್ಕೆಲ್ಲ ಒಂದೇ ತರಹ. ಅವರು ಅರೆಭಾಷೆ ಮಾತನಾಡುವುದರಿಂದ ಅರೆ ಬ್ರಾಹ್ಮಣರಾಗುತ್ತಾರೆಯೇ? ಹಾಗೆಯೇ ನಾವು ಅರೆಭಾಷೆ ಮಾತನಾಡುವುದರಿಂದ ಅರೆಗೌಡರಾಗಲು ಹೇಗೆ ಸಾಧ್ಯ ? ಒಂದು ವೇಳೆ ಅರೆ ಗೌಡರೆಂದು ನಮೂದಿಸಲ್ಪಟ್ಟರೆ ಭಾಷೆಯಲ್ಲಿ ಅರ್ಧ ಲೋಪವಾದಂತೆ ಆ ಭಾಷೆ ಮಾತನಾಡುವ ಜನಾಂಗ, (ಜಾತಿ)ವ್ಯಕ್ತಿ ಕೂಡ ಅರ್ಧವಾಗಲು ಸಾಧ್ಯವೆ? ಇನ್ನರ್ಧ ಯಾವುದು? ಏನಾಯಿತು ಎಲ್ಲಿ ಹೋಯಿತು ಎಂಬ ಅನೇಕ ಪ್ರಶ್ನೆಗಳನ್ನು ಎದುರಿಸಬೇಕಾಗುತ್ತದೆ. ಶ್ರೀಯುತರು ತಿಳಿಸಿದಂತೆ ನಾನಾ ನಗೆ ಪಾಟಿಗೆ ಗುರಿಯಾಗಬೇಕಾಗುತ್ತದೆ. ಭಾಷೆಯನ್ನು ಅರೆಭಾಷೆ ಅಥವಾ ಅರೆಕನ್ನಡ ಎಂದು ನಮೂದಿಸುವುದರಲ್ಲಿ ಆಕ್ಷೇಪಣೆಇಲ್ಲ. ಹಿಂದೆ ಅರೆಭಾಷೆ ಮಾತನಾಡುವವರನ್ನು ಕಡೆಗಣಿಸುತ್ತಿದ್ದುದರಿಂದಲೇ ಈ ಭಾಷೆಗೆ ಪ್ರಾತಿನಿಧ್ಯ ದೊರಕಿರಲಿಲ್ಲ. ಈಗ ಹಾಗಿಲ್ಲ ಬದಲಾವಣೆಯಾಗಿದೆ. ಹಾಗಂತ ಜಾತಿ ಬದಲಾವಣೆ ಸಾಧ್ಯವೆ?

ನಾವು ಮಾತನಾಡುವ ಭಾಷೆ ಆಯಾ ಪರಿಸರಕ್ಕೆ ಹೊಂದಿರುತ್ತದೆ. ಉದಾಹರಣೆಗೆ ಸಂಪಾಜೆಯಲ್ಲಿ ಎಲ್ಲಾ ಜನಾಂಗದವರು ಅರೆಭಾಷೆ ಮಾತನಾಡುತ್ತಾರೆ. ನಮ್ಮಲ್ಲೂ ಅನೇಕ ಕುಟುಂಬಗಳಲ್ಲಿ ಕನ್ನಡ ಮಾತನಾಡುವವರಿದ್ದಾರೆ. ಇತ್ತೀಚಿನ ವರ್ಷಗಳ ವರೆಗೂ ಜೈನಿ ಮನೆ ಕುಟುಂಬಸ್ಥರು ಕೊಡವ ಭಾಷೆ ಮಾತನಾಡುತ್ತಿದ್ದರು ಎಂಬುವುದು ಎಲ್ಲರಿಗೂ ತಿಳಿದ ಸಂಗತಿ. ಕೊಂಬ, ಕುಂಬ, ಕುಟ್ಟ, ಜೈನಿ, ಈ ನಾಲ್ಕು ಮನೆಯವರು ಹಿಂದೆ ಕೊಡವರ ಭಾಷೆ ಮಾತನಾಡುತ್ತಿದ್ದರು. ಹೀಗಿರುವಾಗ ಭಾಷೆಗೂ ಜನಾಂಗಕ್ಕೂ ಅರ್ಥ ಕಲ್ಪಿಸುವುದು ಸರಿಯಲ್ಲ. ಭಾಷೆಯನ್ನು ಜಾತಿಗೂ, ಜಾತಿಯನ್ನು ಭಾಷೆಗೂ ಪರಿವರ್ತಿಸುವುದು ಸರಿಯಲ್ಲ. ಉದಾಹರಣೆಗೆ ಕೊಡವರು ಕೊಡವಬಾಷೆ ಮಾತಾಡುತ್ತಾರೆ. ಅದು ಆ ಜನಾಂಗದ ಮಾತ್ರ ಭಾಷೆಯಂತೆ ಇನ್ನು ಅನೇಕ ಜನಾಂಗದವರ ಮಾತೃಭಾಷೆ ಕೂಡ ಅದೇ ಆಗಿರುವುದು.

ಸಂಪಾದಕರು ತಿಳಿಸಿದಂತೆ ವಿಮರ್ಷೆಗೆ ಅವಕಾಶವುಂಟು. ಇದು ವಾದವಿವಾದಗಳಲ್ಲ. ಇಂತಹ ವಿಮರ್ಷೆಗಳಿಗೆ ಮತ್ತು ಚರ್ಚೆಗಳಿಗೆ ವೇದಿಕೆಯಾಗಿರುವ ಮತ್ತು ಈಗ ಐದನೇ ವರ್ಷಕ್ಕೆ ಪಾದಾರ್ಪಣೆ ಮಾಡುತ್ತಿರುವ ಕೊಡಗು ಸಂಗಾತಿ ಚಿರಾಯುವಾಗಲಿ ಎಂದು ಭೂಮಾತೆಯನ್ನು ಪ್ರಾರ್ಥಿಸುತ್ತೇನೆ.

ಇನ್ನೊಬ್ಬ ಮಹನಿಯರ್ "ಭಿನ್ನ ಭೇಧ" ತ ಹೇಳಿ ಇದೇ ವಿಭಾಗಲಿ ಅರೆಭಾಷೆ ಮೇಲೆ ತುಂಬಾ ಅಭಿಮಾನ ತೋರ್ಸಿಲೊ. ಮತ್ತೆ ಅದರ ಪ್ರಚಾರಕ್ಕೆ ಹಾಗೂ ಅಭಿವೃದ್ಧಿಗೆ ಒತ್ತು ಕೊಡೋಕು ತಾ ವಿನಂತಿಸಿಯೊಳೊ. ಅದ್‌ಕೆ ಅವುಕೆ ಅಭಿನಂದನೆ, ಹಾಗೆನೇ ಸಂಪಾದಕರ್ ಬರ್ದವರ ಹೆಸರ್, ಮನೆ ಹೆಸರ್, ಊರು ಹೆಸರ್ ಪ್ರಕಟಿಸದೆ "ಭಿನ್ನ ಭೇಧ ಮಾಡಿವೆ"ತ ಬರ್ದ ವ್ಯಕ್ತಿನೇ ಒಬ್ಬ ಜನಾಂಗದವ ಹೆಸರ್ ಬೇಡ, ಊರು ಬೇಡ"ತ ಬರ್ದೊಳೊ. ಹೆಸರ್, ಮನೆ ಹೆಸರ್ ಊರ್‌ಹೆಸರ್ ತಿಳ್ಸದವುಕೆ ನಾವು ಏನ್ ಹೇಳೊಕುತ್ತೇಳಿ.

**— ಗೋವಿಂದಮ್ಮನ ಅಚ್ಚಯ್ಯ, ಬೆಂಗಳೂರು.**

## ಸುಂದರಿಯರ ಭಾವಚಿತ್ರ

ಪ್ರಿಯ ಸಂಪಾದಕರೇ,

ನೀವು ಪತ್ರಿಕೆಯ ಮುಖಪುಟದಲ್ಲಿ ಪ್ರತಿಸಲ ವಿಶ್ವ ಸುಂದರಿಯರ ಭಾವ ಚಿತ್ರ ಹಾಕುತ್ತಿರಿ, ವಂದನೆಗಳು. ಆದರೆ ವಿಶ್ವಸುಂದರಿಯರ ಚಿತ್ರಕ್ಕಿಂತ ನಮ್ಮಲ್ಲೆ ಇರುವ ಮಾಜಿ ಸೈನಿಕರುಗಳ (ಉತ್ತಮ ಹುದ್ದೆಯವರ) ಭಾವ ಚಿತ್ರವನ್ನು ಬಳಸುವುದು ಉತ್ತಮವೆಂದು ನನ್ನ ಅನಿಸಿಕೆ. ಮತ್ತು" ಕೊಡಗು ಸಂಗಾತಿ" ಸುಮಾರು 5 ವರ್ಷಗಳಿಂದ ಒಂದೇ ಅಳತೆ, ವಿನ್ಯಾಸ, ಮುಖಪುಟ, ಬಣ್ಣ ಹೊಂದಿ ಬರುತ್ತಿದ್ದು ಬೆಲೆಯಲ್ಲಿ ಸ್ವಲ್ಪ ವ್ಯತ್ಯಾಸ ಹೊಂದಿದೆಯಷ್ಟೆ ಸಾಮಾಗ್ರಿಗಳಿಗೆ ಬೆಲೆ ಏರಿಕೆಯ ಈ ಸಂದರ್ಭದಲ್ಲಿ ತೊಂದರೆಗೊಳಗಾಗಬಹುದು. ಆದರೂ ಸಾಧ್ಯವಾದಷ್ಟು ಆಕರ್ಷಣೆಯ ಕೆಲವು ಬದಲಾವಣೆಗಳನ್ನು ಮಾಡುವುದು ಒಳಿತು. ಹಾಗೂ ಸಂಪಾದಕೀಯ ಬರವಣಿಗೆ ತೀಕ್ಷ್ಣತೆ ಸಾಲದು. ಅರ್ಥವತ್ತಾದ ಪದಗಳನು ತುಂಬಿ ಸಂಪಾದಕೀಯ ಬಹಳ ಪ್ರಯೋಜನಕಾರಿಯಾಗಬಲ್ಲದು ಮತ್ತು ತಿರುವುಗಳಿಗೆ ಅವಕಾಶವಾಗುವುದೆಂದು ನನ್ನ ಅನಿಸಿಕೆ

**ಹೆಸರು ಬೇಡ.**

## ಉಳಿದರ್ಧ ಎಲ್ಲಿ ?

ಮಾನ್ಯ ಸಂಪಾದಕರೇ,

ನೀವು ಗೌಡ ಭಾಷೆಯನ್ನು 'ಅರೆಭಾಷೆ"ಎಂಬ ಪದ ಪ್ರಯೋಗದಿಂದ ಬಳಸುತ್ತಿದ್ದೀರಿ. ಇದು ಭಾಷೆಯನ್ನು ತುಂಬಾ ಲಘುವಾಗಿ ಉಪಯೋಗಿಸಿದಂತೆ ಭಾಸವಾಗುತ್ತದೆ. ಯಾವುದೇ ಭಾಷೆಯು ಅದರದೇ ಆದ ಸಾಂಸ್ಕೃತಿಕ ಮೌಲ್ಯಗಳಿಂದ ವಿಶಿಷ್ಟವೇ ಆಗಿದೆ. ಗೌಡಭಾಷೆ ಅರೆ ಆದರೆ ಅದರ ಉಳಿದರ್ಧ ಎಲ್ಲಿ? ಹವ್ಯಕ ಭಾಷೆ, ಕೊಡವಭಾಷೆ ಇದ್ದಂತೆ ಗೌಡರು ಗೌಡಭಾಷೆ (ಗೌಡ ಕನ್ನಡ) ಎಂತಲೇ ಬಳಸಬೇಕೇ ವಿನಃ ಅರೆಭಾಷೆ ಅಂತಲ್ಲ. ಈ ಭಾಷೆಯನ್ನು ಪ್ರಪಂಚದಲ್ಲಿ ಗೌಡರು ಮಾತ್ರ ಆಡುವುದರಿಂದ ಇದು ಗೌಡ ಭಾಷೆಯೇ ಆಗಬೇಕು. ನಮಗಾಗಿಯೇ ಇರುವ ಈ ಪತ್ರಿಕೆ ಬಗ್ಗೆ ಎಚ್ಚರ ವಹಿಸುವುದು ವಿಹಿತ.

**— ಯುಸುಗೌ ಗುತ್ತಿಗಾರು, ಬೆಳ್ಳಾರೆ.**

---

**ಕಾಗೆ ಮರಿ ಕಾಗೆಗೆ ಲಾಯ್ಕ ಗಡ.**

### ನಿಮ್ಗ್ಂತ ಲಾಯಿಕ ತಿಳ್‌ದಂವ

ಸಂಪಾದಕರ್‌ಗೆ,

ನಾನ್ ನಿಮ್ಮ ಪತ್ರಿಕೆನ ಕಳ್ಸಿತ ಹೇಳಿ ಒಂದುವರ್ಷದ ದುಡ್ಡ್ ಕೊಟ್ಟದ್ದ್ ತಪ್ಪುತ ನಿಮ್ಮ ಪತ್ರಿಕೆ ಬಾಕನ ಗೊತ್ತಾತ್. ಮತ್ತೆ ಏನ್ ಮಾಡ್ಕೆ ಆದುಲೆತಾ ಸುಮ್ಮನೆ ಇದ್ದೆ. ಮತ್ತೆ ಪತ್ರಿಕೆ ಬೇಕಾದರೆ ನೀವು ಹೇಳ್ಕೆ ಮುಂದೆನೆ ಮೆಂಬರ್ ಶಿಪ್ಪ್ ರಿನ್ಯೂ ಮಾಡ್ತಿದ್ದೆ. ನೀವ್ ಮೆಂಬರ್‌ಶಿಪ್ ರಿನ್ಯೂ ಮಾಡದೆ ನೀಮ್ಮನ್ನ ಪತ್ರಿಕೆನ ಕಳ್ಸಿಕೆ ನಾವೇನ್ ನಿಮ್ಮ ತಿಕಕ್ಕೆ ಹೊಡ್ತ್‌ಲ್ಲೆ. ನೀವ್ ಪುಸ್ತಕನ ಸುಮ್ಮನೆ ಕಳ್ಸಿ ಬುಟ್ಟ್ ಈಗ ದುಡ್ಡು ಕಳ್ಸೀತಾ ಹೇಳಿ ಕಾಡ್ ಹಾಕಿ ಮರ್ಯಾದಿ ಕಳ್ಕೊಂದು ಬೇಡ. (ಇದ್ದರೆ) ಈಗ ಪತ್ರಿಕೆ ನಿಮ್ಮ ನೆಂಟರ್ ಮತ್ತೆ ಎರಡ್ ಮೂರ್ ಮನೇದ್ ಆವುಟ್ಟು. ನಮ್ಮ ಜ್ಞಾತಿಯವ್‌ಕೆ ಸಂಬಂದ ಪಟ್ಟದ್ ಅಲ್ಲತ ಆವುಟ್ಟು. ಈಗ ಬರೋ ಲೇಕನ ಎಲ್ಲಾ ಯಾವುದೊ ಹಳೇ ಪುಸ್ತಕಂದ ಹಿರಿಯವು ಬರ್ದರ ಕದ್ದ್ ಬರೆಯೊದು ಆವುಟ್ಟು. ಕೊನೇ ಪಕ್ಷ ಆ ಹಿರಿಯರ ನೆನಪಿಸೊ ಸೌಜನ್ಯ ನಿಮಿಗೆ ಇಲ್ಲೆ. ನಮ್ಮ ಸಂಸ್ಕೃತಿಗೆ ನೀವೇ ವಾರಿಸ್‌ದಾರರಂಗೆ ಬರೀತಾ ಒಳರಿ. ಇದ್ ಶುಭ ಸೂಚನೆ ಅಂತೂ ಅಲ್ಲ. ಮತ್ತೊಂದು ವಿಷಯ ಈ ಪಟ್ಟಡ ಪ್ರಭಾಕರ ಸಂಗಾತಿ ಪುಸ್ತಕತ ಅಲ್ಲಿ ಇಲ್ಲಿ ಅವರ್‌ಂದ ಇವರ್‌ಂದ ದುಡ್ಡು ತಗಂಡ್ ದಪ್ಪ ಆವುಟು. ಮತ್ತೆ ಯಾವುದೇ ಲೇಖನ ಪುಸ್ತಕಲಿ ಹಾಕಿಕೆ ದುಡ್ಡು ಕೇಳ್ದೆತ ಹೇಳ್ತೊಳೊ. ಇದ್ ಸತ್ಯ ಆದರೆ ಈ ಪತ್ರಿಕೆಗೆ ಹೆಚ್ಚ್ ಆಯುಷ್ಯ ಇಲ್ಲೆ. ಪತ್ರಿಕೆನ ಮುಂದುವರ್‍ಸೊಕುತಾ ಆಸೆ ಇದ್ದರೆ ನಮ್ಮಲ್ಲಿ ತಿಳ್ದೊವ್ರ್ ತುಂಬಾ ಜನ ಒಳೊ. ಅವರ್ನ ಕೇಳಿ ಮುಂದೆ ಹೋದು ಒಳ್ಳೆದ್. ಅದ್ ಬುಟ್ಟ್ ಆನೆ ಹೋದೇ ದಾರಿತ ನೀವು ಪತ್ರಿಕೆಲಿ ಹಾಕಿದ್ದೇ ನಮ್ಮ ಸಂಸ್ಕೃತಿತ ಹೇಳ್ರೆ ಅದ್ ಪತ್ರಿಕೆಗೆ ಅಂತ್ಯಕಾಲ ತ ಹೇಳಕ್ಕ್.

**ನಮ್ಮ ಸಂಸ್ಕೃತಿನ ನಿಮ್ಗ್ಂತ ಲಾಯಿಕ ತಿಳ್‌ದಂವ,**

**ವಿ.ಸೂ.:** *ಈ ಕೊಡಗುಸಂಗಾತಿ ಪತ್ರಿಕೆ ನಿಮ್ಮದ್. ನೀವು ತಿಳ್ದವು ವಳ್ಳವಳ್ಳ ಲೇಕನ ಕಳ್ಸಿ. ನಾವ್ ಖಂಡಿತ ಹಾಕುವೆ. ನೀವ್ ಉತ್ತಮ ಸಲಹೆ ನೀಡಿ ಸಹಕರಿಸಿ. ನಮ್ಮ ದಾಖಲಾತಿನ ಸಹ ನೋಡಕ್. ಪತ್ರಿಕೆ ಬೆಳೆಯಲಿ. ಸಾಧ್ಯ ಆದರೆ ಖುದ್ದು ಭೇಟಿಯಾಗಿ ಚರ್ಚೆಮಾಡ್ನೊ.*

**— ಸಂಪಾದಕಿ**

---

**10 ನೇ ಪುಟದಿಂದ**

ಚೆನ್ನಾಗಿತ್ತಲ್ಲಾ? ಅಂತ ಅವರು ಹೇಳುತ್ತಾರೆ. ಇದು ಒಂದು ದುರಾಲೋಚನೆ ಅಲ್ಲವೆ? ಅದರಲ್ಲೂ ಒಂದು ಆಸೆ ಎಂತಹ ವಿಭಿನ್ನ ನೀವೆ ಹೇಳಿ? ಸತ್ತ ಮೇಲೆ ಹೊಗಳುತ್ತಾರೋ, ತೆಗಳುತ್ತಾರೋ, ಅದು ದೇವರಿಗೆ ಗೊತ್ತು, ಮನುಷ್ಯನ ಬೆಲೆ ಜೀವಿತ ಇರುವ ತನಕ ಮಾತ್ರ ಅಲ್ಲವೆ? ಮನುಷ್ಯನು ಜೀವಿತದಲ್ಲಿ ನಾನಾ ರೀತಿಯ ಕೆಲಸಕಾರ್ಯಗಳನ್ನು ಮಾಡಿ ಸಮಾಜಕ್ಕೆ ಗಣ್ಯವ್ಯಕ್ತಿ ಎಂದೆನಿಸಿ ಅವನು ಸತ್ತಾಗ ಆ ಹೊಗಳಿಕೆ ಅವರಿಗೆ ಸಲ್ಲುತ್ತದೆಯೋ? ನೀವೆ ಹೇಳಿ ಹೀಗಾಗ ಬಾರದಪ್ಪ, ಅಂತ ಹೇಳುವುದುಂಟು. ಅದು ಸಹಜ ಅಲ್ಲವೆ? ನೀವೆ ಯೋಚಿಸಿ ನೋಡಿ?

---

**18 ನೇ ಪುಟದಿಂದ**

ಧೈರ್ಯಹೇಳಿ ನಾನ್ ಹೆಂಗಾರ್ ಮಾಡಿ ಮದ್ವೆ ಚಪ್ಪರಕೆ ಆಗದಿದ್ರೂ ಮುಹೂರ್ತದಿನ ಬೆಳಿಗ್ಗೆಗೆ ಖಂಡಿತ ಬನ್ನೆ. ನನ್ನ ಜವಾಬ್ದಾರಿನ ನೀನ್ ಲಾಯಕ್ ನಿಭಾಯಿಸಿಯತ್ತೇಳ್ಟು ಭರವಸೆ ನಂಗೆ ಉಟ್ಟುತ್ತಾ ಹೇಳ್ತ್.

ಆಗ Mr. ಮಹೇಂದ್ರಪಾಲ್ ಡೆಪಿನೆಟ್ಲೀ ನಾನ್ ನಡ್ಸಿಕೊಟ್ಟನೆ ತಾ ಹೇಳಿ Mr. ರಾಜುನ ಕೈ ಮೇಲೆ ಕೈ ಜೋಡ್ಸಿ ನೀನ್ ಏನೂ ಬೇಜಾರ್ ಮಾಡ್‌ಬೇಡ ಉಷಾರಾಗಿ ಧಾರೆ ಮುಹೂರ್ತದ ಹೊತ್ತಿಗಾದ್ರೂ ನನ್ನ ಅತ್ತಿಗೆ ಒಟ್ಟಿಗೆ ಬಂದ್ ತಲ್ಪಿ ಬುಡ್‌ತಾ ಕೇಳಿಕಂಡತ್.

*ಮುಂದುವರ್ದದೆ.*

(ಮುಂದಿನ ಸಂಚಿಕೆಯಲ್ಲಿ Mr.ರಾಜು ಬಂದ್ ತಲುಪುದೊ?

---

## ಗುರಿ ಮುಟ್ಟಕು -9

ಮನುಸನ ಆಸೆ ಅಭಿಲಾಸೆ ಒಂದಾ-ಎರಡಾ? ನಂಗೆ ಅದ್ ಮಾಡಕು ಇದ್ ಮಾಡಕುತ್ತೇಳಿಕಂಡ್ ಪ್ರತೀಯೊಬ್ಬನೂ ನೂರಾರ್ ನಿರ್ಧಾರ ಮಾಡ್ತು. ಹಂಗೆನೆ ಗಾಳಿ ಗೋಪುರ ಕಟ್ಟಿ ಪ್ರಯೋಜನ ಇಲ್ಲೆ. ನಿರ್ಧಾರ ಮಾಡ್ದರ ಕಾರ್ಯ ರೂಪಕ್ಕೆ ತಕಂಡ್ ಬರ್‍ತ್ ಹಟ ಇರಕು. ಕಾರ್ಯ ವಂದರ ಗುರಿ ಇರಕು. ಹಂಸ ಹಕ್ಕಿ ಯೆಷ್ಟ್ ಕೊಡಿಲಿ ಯೆಸ್ಟ್ ದೂರಕ್ಕೆ ಹಾರ್ದರೂ ಸರೋವರದ ನೀರ್‌ಗೇ ಇಳಿಯೊದಲ್ಲದೆ ಭೂಮಿಗಿಳಿಯದುಲೆ. ಮನುಸ ವಂದ್ ವಳ್ಳ ಕೆಲ್ಸ ಮಾಡ್ನೆತ್ತೇಳಿ ನಿರ್ದ್ಧಾರ ಮಾಡ್ದ ನಂತ್ರ ಬೇರೆ ಯೆಸ್ಟೆ ಕಸ್ಟ ಬರ್ಲಿ ತನ್ನ ಗುರಿಂದ ಹಿಂದಕ್ಕೆ ಬಾ ಕಾಗದ್. ಅಂತ ನಿರ್ದ್ಧಾರ ಇಲ್ಲದವು ಗಾಳಿಗೆ ದರ್ಗ್ಗ ಹಾರ್ದಂಗೆ ದಿಕ್ಕಿಲ್ಲದೆ ಹಾರಿ ಹೋದವೆ. ಜೀವನಕ್ಕೆ ಯಾವ್ದೇ ನೆಲೆ ಇಲ್ಲದಾದೆ. ಯಾವ ಗುರಿನ ಮುಟ್ಟಿಕಾದುಲೆ. ವಳ್ಳ ಗುರಿ ಬೇಕ್. ಅದ್ಕೆ ನಿರ್ದ್ಧಾರ ಮಾಡ್ತು ಯೋಜನೆ ಬೇಕ್. ಕಸ್ಟನ ಪರಿಹರ್ಸಿಕಂಡ್ ತನ್ನ ಗುರಿನ ಮುಟ್ಟಕು.

ಕೊಡವ ಭಾಷೆಲಿ : **ಚೇಂದ್ರಿಮಾಡ ಮುತ್ತಪ್ಪ**

ಅರೆಭಾಷೆಗೆ : **ಪಟ್ಟಡ ಪ್ರಭಾಕರ.**

---

## ನಿಧನ

ಮಾನ್ಯರೇ,

ಸುಳ್ಯತಾಲೋಕು ಆಲೆಟಿ ಗ್ರಾಮದ ಕೊಲ್ಚಾರು ಮನೆಯ ಸೀತಮ್ಮನವರು ದಿನಾಂಕ 24-3-2001ರಂದು ವೈಕುಂಠ ವಾಸಿಯಾದರು. ಇವರಿಗೆ 95ವರ್ಷ ಪ್ರಾಯವಾಗಿತ್ತು. ಇವರು ಸಮಾಜದಲ್ಲಿ ಗಣ್ಯವ್ಯಕ್ತಿಯಾಗಿದ್ದು 1ಗಂಡು, 6 ಹೆಣ್ಣುಮಕ್ಕಳು 18 ಮೊಮ್ಮಕ್ಕಳನ್ನು ಹಾಗೂ ಅಪಾರ ಬಂಧುಬಳಗವನ್ನು ಅಗಲಿದ್ದಾರೆ

— ಮುದಿಯಾರ ಪದ್ಮಾವತಿ, ಮಡಿಕೇರಿ.

---

ಬೆಳ್ಳಗೆ ಇರ್ದು ಎಲ್ಲ ಹಾಲಲ್ಲ.

## ಬೆಂಗಳೂರಿನಲ್ಲಿ ವಸತಿ ಸೌಕರ್ಯ ಲಭ್ಯ.

ಮೂರು ಜನ ಹೆಂಣು ಮಕ್ಕಳಿಗೆ ಉಳಿದು ಕೊಳ್ಳಲು ಅವಕಾಶ. ಊಟದ ವ್ಯವಸ್ಥೆ, ನೀರಿನ ವ್ಯವಸ್ಥೆ, ಒಳಬರುವ ದೂರವಾಣಿ ಸೌಕರ್ಯ ಮತ್ತು ತರಕಾರಿ / ಮಾಂಸದೂಟದ ವ್ಯವಸ್ಥೆ ಇರುವುದು. ಆಸಕ್ತರು ಈ ಕೆಳಗಿನ ವಿಳಾಸವನ್ನು ಸಂಪರ್ಕಿಸುವುದು.

**ಪುಷ್ಪಲತಾ ಟಿ. ಜಿ.**
ನಂ. 132, ಹೆಚ್.ಎಂ.ಟಿ. ಲೇಔಟ್,
7ನೇ ಮೇನ್, 7ನೇ ಕ್ರಾಸ್,
ಆರ್. ಟಿ. ನಗರ, ಬೆಂಗಳೂರು

ಬೆಂಗಳೂರು ☎ : 98440 - 36487



ದಿ|| ತಡಿಯಪ್ಪನ ಪೂವಯ್ಯ
ಮರಣ : 5-5-1969

## ಚಿರಸ್ಮರಣೆ

ನೀವು ನಮ್ಮನ್ನು ಆಗಲಿ 3 ದಶಕಗಳಿಗೂ ಹೆಚ್ಚು ಸಂವತ್ಸರಗಳು ಸಂದರೂ ಸಹ ನಿಮ್ಮ ಸವಿನೆನಪು ಸದಾ ನಮ್ಮ ಹೃದಯದಲ್ಲಿ ಹಚ್ಚ ಹಸಿರಾಗಿ ಉಳಿದಿದೆಯಲ್ಲದೆ ಸದಾ ನಿಮ್ಮ ಆಶೀರ್ವಾದ ನಮ್ಮ ಮೇಲೆ ಇರಲೆಂದು ಬಯಸುವ,

**ಪತ್ನಿ : ಸಾಕಮ್ಮ, ಮಕ್ಕಳು,**
**ಅಳಿಯಂದಿರು, ಸೊಸೆಯಂದಿರು,**
**ಮೊಮ್ಮಕ್ಕಳು ಹಾಗೂ ಮರಿಮಕ್ಕಳು.**

**ಪ್ರಕಟಣೆ : ಟಿ. ಪಿ. ಕುಮಾರಜಯ, ಮೈಸೂರು**



ದಿ|| ಅಂಚೆಮನೆ ನಂಜುಂಡ

## 8ನೇ ವರ್ಷದ ಚಿರಸ್ಮರಣೆ

ಜನನ : 8-11-1942 ಮರಣ : 27-4-1993

ನೀವು ನಮ್ಮನ್ನು ಅಗಲಿದರು ನಿಮ್ಮ ಸವಿನೆನಪು, ಪ್ರೀತಿ, ವಾತ್ಸಲ್ಯ, ಸಲಹೆ, ಸಹಕಾರ ಎಲ್ಲವು ಚಿರನೂತನವಾಗಿದೆ. ನಿಮ್ಮ ಜೀವನದ ಆದರ್ಶವನ್ನು ಎಂದೆಂದಿಗೂ ಮರೆಯಲಾರೆವು.

ನಿಮ್ಮ ಆತ್ಮಕ್ಕೆ ಚಿರಶಾಂತಿಯನ್ನು ಕೋರುವ,

ಪತ್ನಿ : **ಅಂಚೆಮನೆ ಜಯಮ್ಮ,**
ಪುತ್ರ : **ಅಂಚೆಮನೆ ಸುಧಿ ಕುಮಾರ್**, ಸೊಸೆ : **ಅಂಚೆಮನೆ ನಮಿತ,**
ಪುತ್ರಿ : **ಕೆ. ಜೆ. ಮಮತ**, ಅಳಿಯ : **ಕೆ. ವಿ. ಜಗನ್ನಾಥ್ ಸ್ವಸ್ತಿಕ್,**
ಮೊಮ್ಮಕ್ಕಳು : **ಭೂಮಿಕಾ, ನಿಹಾರಿಕಾ,** ನಿರಾಧಿಕ ಅಭ್ಯತ್‌ಮಂಗಲ
☎ : 08274 - 58240



ದಿ|| ಕಾನೆಹಿತ್ಲು ಜಾನಕಿ ದೇವಪ್ಪ
ಮರಣ : 21-4-1996

## ಚಿರಸ್ಮರಣೆ

ಅಮ್ಮಾ ನೀವು ನಮನ್ನಗಲಿ ಇಂದಿಗೆ ಐದು ವರ್ಷಗಳೇ ಸಂದರೂ,ನಿಮ್ಮ ಮಾತೃ ವಾತ್ಸಲ್ಯ, ಪ್ರೀತಿ, ಒಡನಾಟ ನಮ್ಮಲ್ಲಿ ಸದಾ ಹಸಿರಾಗಿದ್ದು, ಆ ಭಗವಂತನಲ್ಲಿ ನಿಮ್ಮ ದಿವ್ಯಾತ್ಮಕ್ಕೆ ಚಿರಶಾಂತಿಯನ್ನು ಕೋರುತ್ತಾ ನಿಮ್ಮ ಆದರ್ಶ ಬದುಕು ನಮಗೆ ದಾರಿ ದೀಪವಾಗಲೆಂದು ಅನುದಿನವು ಹಾರೈಸುವೆವು.

ಮಕ್ಕಳಾದ : **ಲತಾ ಮೋಹನ್, ಗುಣಾ,**
**ದಿವ್ಯ, ರಂಜು ಮತ್ತು ಕುಟುಂಬ**
ಸುದರ್ಶನ್ ಸರ್ಕಲ್, ಮಡಿಕೇರಿ
☎ : 21506

**ಪ್ರಕಟಣೆ : ದಿವ್ಯ**

Reg. No. KA/SK/MYS-88 Registered : 10-01-96 TCI Kar. 09592



# ಕಾವೇರಿನಾಡು ವಿದ್ಯಾ ಸಂಸ್ಥೆ



ಕಾಡುಕರೇನಹಳ್ಳಿ, ಮಹದೇವಪುರ,
ನೆಲಮಂಗಳ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ

ಕಾವೇರಿನಾಡು ವಿದ್ಯಾಸಂಸ್ಥೆಯು ಕಳೆದ 5 ವರ್ಷಗಳಿಂದ LKG/UKG ಯಿಂದ 2001 - 2002ಕ್ಕೆ ಐದನೆ ತರಗತಿಯನ್ನು ಇಂಗ್ಲೀಷ್ ಮಾಧ್ಯಮದಲ್ಲಿ ನಡೆಸುತ್ತಿದ್ದು ಉತ್ತಮ ವಸತಿ ಶಾಲೆಯಾಗಿದೆ. ಈ ಶಾಲೆಯು ಹಳ್ಳಿಯ ವಾತಾವರಣದಲ್ಲಿದ್ದು, ವಸತಿ ಶಾಲೆಯಲ್ಲಿ ಮಕ್ಕಳಿಗೆ, ಮಲಗಲು ಮಂಚಗಳು, ಮತ್ತು ಊಟದ ಸೌಕರ್ಯವಿದೆ. ಒಂದು ವರ್ಷಕ್ಕೆ 10,000/- ಮಾತ್ರ ಕಟ್ಟಿದರೆ 2 ಸೆಟ್ ಯೂನಿಫಾರಂ, ನೋಟು ಪುಸ್ತಕ, ಓದುವ ಪುಸ್ತಕ ಒದಗಿಸಲಾಗುವುದು.

ಅಲ್ಲದೆ ಶಾಲೆಯಲ್ಲಿ ಡ್ಯಾನ್ಸ್, ಡ್ರಾಮಾ, ಕರಾಟೆ, ಯೋಗಾಸನ, ಭರತನಾಟ್ಯವನ್ನು ಸಹ ಕಲಿಸಲಾಗುವುದು. ಮಕ್ಕಳ ಜ್ಞಾನಾರ್ಜನೆಗಾಗಿ ಉಪನ್ಯಾಸವಿರುವುದು. ಮತ್ತು ಪುಸ್ತಕ ಭಂಡಾರವಿದೆ. ಈ ಸುವರ್ಣಾವಕಾಶವನ್ನು ಪೋಷಕರು ಉಪಯೋಗಿಸಿಕೊಂಡು ನಮ್ಮ ಶಾಲೆಯಲ್ಲಿ ನಿಮ್ಮ ಮಕ್ಕಳನ್ನು ಸೇರಿಸಿ ಭವಿಷ್ಯದ ಹಾದಿಯನ್ನು ಸೃಷ್ಟಿಸುವಂತೆ ಕೋರಿದೆ.

ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ :

ಅಮ್ಮಾಜೀರ ಪೊನ್ನಪ್ಪ
ಕಾವೇರಿನಾಡು ವಿದ್ಯಾಸಂಸ್ಥೆ, ಬೆಂಗಳೂರು

# ಕಾವೇರಿನಾಡು ಸಾಂಸ್ಕೃತಿಕ ಅಕಾಡೆಮಿ

ಕಾಡುಕರೇನಹಳ್ಳಿ, ಮಹದೇವಪುರ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ

ಮಾನ್ಯರೇ,

ಕಾರಣಾಂತರದಿಂದ ಈ ಮೇಲಿನ ಸಾಂಸ್ಕೃತಿಕ ಅಕಾಡೆಮಿಯನ್ನು ನಡೆಯಿಸುವುದು ತೊಂದರೆಯಾದ ಕಾರಣ ನಾನು ಪ್ರತಿ ವರ್ಷವೂ ಕಾವೇರಿ ನಾಡಿನಲ್ಲಿ ನಡೆಸುತ್ತಿದ್ದ ಸಮಾರಂಭಕ್ಕೆ ಅಕಾಡೆಮಿಯಲ್ಲಿ ಸದಸ್ಯತ್ವ ಪಡೆದುಕೊಂಡ ಸದಸ್ಯರುಗಳನ್ನು ಮಾತ್ರ ಆಹ್ವಾನಿಸಿ ಇನ್ನು ಮುಂದಕ್ಕೆ ಸಮಾರಂಭವನ್ನು ನಡೆಸುವುದೆಂದು ತೀರ್ಮಾನಿಸಿರುವೆನು. ಅದಕ್ಕೆ ತಾವು ಸಹಕಾರ ನೀಡುವಂತೆ ತಮ್ಮಲ್ಲಿ ಕಳಕಳಿಯಿಂದ ಪ್ರಾರ್ಥಿಸುತ್ತೇನೆ.

- ಅಮ್ಮಾಜೀರ ಪೊನ್ನಪ್ಪ
ಕಾವೇರಿನಾಡು ವಿದ್ಯಾಸಂಸ್ಥೆ, ಬೆಂಗಳೂರು

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ✆ **: 0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ✆ : 0821/431792.